ಶರಣ ಸಾಹಿತ್ಯ ಗ್ರಂಥಮಾಲಾ-೨೪

'ಗುರುಸಿದ್ಧಕವಿ' ವಿರಚಿತ

# ಮಾದೇಶ್ವರ ಸಾಂಗತ್ಯ

## —ಕವಿ ಕಾವ್ಯವಿಚಾರ ಸಹಿತ



ಸಂಪಾದಕರು ಮತ್ತು ಪ್ರಕಾಶಕರು

ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ

**ಬ. ಶಿವಮೂರ್ತಿಶಾಸ್ತ್ರೀ,** ಬೆಂಗಳೂರು

೧೯೫೫

**ಬೆಲೆ ರೂ ೧-೮-೦**



ಶ್ರೀ ಪ್ರಭುಸ್ವಾಮಿ ಬೆಟ್ಟ, ಕುಂತೂರು



ಶ್ರೀ ಮಾದೇಶ್ವರಸ್ವಾಮಿ ದೇವಾಲಯದ ಒಂದು ನೋಟ.



ಶಿವಯೋಗ ಸಮಾಧಿಯಲ್ಲಿ ಲಿಂಗರೂಪಿ
ಶ್ರೀ ಮಲೆಯ ಮಾದೇಶ್ವರ ಸ್ವಾಮಿಯವರು



ಶ್ರೀ ಮಾದೇಶ್ವರ-ದೇವರ ಸನ್ನಿಧಿಗೆ ನವರತ್ನಾಭರಣಗಳನ್ನೂ
ನೂತನರಥವನ್ನೂ ಭಕ್ತಿಯಿಂದ ಒಪ್ಪಿಸಿದ ರಾಜರ್ಷಿಗಳು

**ಕೈ|| ನಾಲ್ವಡಿ ಕೃಷ್ಣರಾಜ ಒಡೆಯರು**

(ಆಳಿದ ಮೈಸೂರು ಮಹಾರಾಜರು)

ಶ್ರೀ ಮಾದೇಶ್ವರ ಸಾಂಗತ್ಯ



ಶ್ರೀ ಮಾದೇಶ್ವರ ದೇವರ ಉತ್ಸವದಲ್ಲಿ
ಶ್ರೀಮನ್ಮಹಾರಾಜರು
ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್
ಮಹಾಸ್ವಾಮಿಯವರು

ಶ್ರೀ ನಿರ್ವಾಣಯ ಗಣೇಶ್ವರಾಯನಮಃ

ಮಿಣ್ಣಾದ ಗುರುಸಿದ್ಧಪ್ಪ ಕವಿ ವಿರಚಿತ

# ಮಾದೇಶ್ವರ ಸಾಂಗತ್ಯ

## ಮೊದಲನೆಯ ಸಂಧಿ



ಶ್ರೀ ಗುರು ಸಿದ್ಧಲಿಂಗೇಶ ಮಹೇಶನ
    ನಾಗರಕ್ಷಯನ ನಮಿತನ
ಯೋಗೀಶ್ವರಜನ ಪಾಲಕ ಚರಣವ
    ಬೇಗ ಕೊಡನಗ ಮತಿಯನು ೧

ಮಂದರ ಗಿರಿಯ ನಿವಾಸ ಮಾದೇಶ್ವರ
    ಬಂದೆನ್ನ ಹೃದಯದಿ ನಲಿಸಿ
ಚೆಂದದಿ ಮೊದಲೀ ಕೃತಿಯನು ಪೇಳ್ವನುತಲ
    ಇಂದುಧರನು ಕೊಟ್ಟ ವರದ ೨

ಎಡದಲ್ಲಿ ವಿಷ್ಣುವ ಬಲದಲ್ಲಿ ಬ್ರಹ್ಮನ
    ನಡುಹೃದಯದಲಿ ರುದ್ರನನು
ಸಡಗರದಿಂ ಪತ್ತ ಪರಶಿವನಂ ಸ್ರಗ
    ಪೃಥದಿಂದ ನಾಸರಗುವೆನು ೩

ದೇವರು ಮೂವರುಂಟೆಂಬರು ಲೋಕದ
ಗಾವಿಲ ಮನುಜರರಿಯದೆ
ದೇವರು ಒಬ್ಬನಲ್ಲದೆಯಿಲ್ಲ ಜಗಕೆಂದು
ಭಾವಿಸಿ ಶ್ರುತಿ ಸಾರುತಿಹುದು ೪

ಸೃಷ್ಟಿಗೆ ಕರ್ತನ ಬ್ರಹ್ಮ ಮೊದಲಿಸಿದ (?)
ವಿಷ್ಣುವ ರಕ್ಷಿಸಲೆಂದು
ನೆಟ್ಟನೆ ಶಿಕ್ಷೆಯ ಮಾಡೆಂದು ರುದ್ರಗೆ
ಕಟ್ಟುಮಾಡಿದ ಪರಶಿವನು ೫

ಹರನರ್ಧಾಂಗಿ ಗಿರಿಜೆಯ ವಂದಿತ
ಸುರನತ ಪಾದ ಪಂಕಜೆಯ
ಇರದೆ ವಂದಿಸಿ ನಾನು ಪೇಳುವೆ ಕೃತಿಯನು
ಗರುವೆ ಕೊಡೆನಗೆ ಮತಿಯನು ೬

ಅಂಗಜ ವೈರಿಯ ಮಕುಟದೊಳ್ ನೆಲಸಿರ್ದು
ಹಿಂಗದೆ ಜಗವ ಪಾಲಿಸುವ
ಗಂಗೆಯ ಚರಣಾರವಿಂದಗಳಿಗೆ ಕ
ರಂಗಳ ಮುಗಿದು ನುತಿಸುವೆನು ೭

ಎರಗುವೆ ನಮ್ಮಡಿದಾವರೆಗಳಿಗೆ ನಾ
ಹರಕೆಯ ಕೊಡು ಬೇಗದಲಿ
ಕರಿಗೊರಳನ ಸುತ ಗಜಮುಖದಯ್ಯನೆ
ಮರೆಯದೆ ವರವ ಕೊಡೆನಗೆ ೮

ದೂಷಕ ದಕ್ಷನು ಯಾಗನ ಮಾದೆ ಕಂ-
ಡೀಶನು ಫಣೆಗಣ್ಣ ತೆರೆಯೆ
ಕಾಸೆ ಹಲಗೆ ಖಂಡೆಯವಿಡಿದೆಸೆವ ವೀ-
ರೇಶಗೆ ನಾನೆರಗುವೆನು ೯

ವಾಣಿ ಮೆಚ್ಚಿದಳು ಮುನ್ನಿನ ಕವಿಗಳಿಗೀಗ
ಮಾಣದೆ ಸವಿನುಡಿಯಿಂದೆ
ಜಾಣೆ ಕೊಡೆನಗೆ ಮತಿಯನೀಗ ಬ್ರಹ್ಮನ
ರಾಣಿಯೆ ನಾ ಬಲಗೊಂಬೆ ೧೦

ಈಶನ ವಾಹನ ದೇಶಕಧಿಕವೆಂದು
ಆಶೆವಿಡಿದು ನಾನು ನಿಮ್ಮ
ಬೇಸರದೆ ಭಜಿಸುವೆನು ಮತಿಗೊಡು ಬಸ-
ವೇಶ ಅಂಘ್ರಿಗೆ ಎರಗುವೆನು ೧೧

ಎನ್ನ ರಕ್ಷಿಸು ಷಡುಸ್ಥಲವ ಸಂಪನ್ನನೆ
ಮನ್ನಿಸಿ ಮತಿಯ ಕೊಡೆನಗೆ
ಚೆನ್ನಬಸವ ಅಂಘ್ರಿಕಮಲಕೆರಗಿ ನಾನು
ಇನ್ನು ಪೇಳುವೆನು ಈ ಕೃತಿಯ ೧೨

ಶೂಲದ ಬ್ರಹ್ಮಯ್ಯ ಸುರಗಿಯ ಚೌಡಯ್ಯ
ಕಾಲಾಗ್ನಿ ರುದ್ರಯ್ಯನವರ
ಬಾಲ ಬ್ರಹ್ಮಯ್ಯನು ಭಾಸುರದೇವಯ್ಯ
ಕೋಲ ಶಾಂತಯ್ಯಗೆರಗುವೆ ೧೩

ಇಂಡಿಯ ಶಾಂತಯ್ಯ ಮೆರೆಮಿಂಡದೇವರು
ಗುಂಡಯ್ಯ ಸೇದಿರಾಜಯ್ಯ
ಗಂಡುಗತ್ತರಿಯ ನಾಚಯ್ಯ ಮಳೆಯರಾಜ
ಮಿಂಡಸಂಗಯ್ಯಗೆರಗುವೆ ೧೪

ಕಕ್ಕಯ್ಯ ಚಿಕ್ಕಯ್ಯ ಕಲಕೇತ ಬ್ರಹ್ಮಯ್ಯ
ಒಕ್ಕಲಿಗರ ಮುದ್ದಯ್ಯ
ರಕ್ಕಸಬ್ರಹ್ಮಯ್ಯ ನುಲಿಯ ಚಂದಯ್ಯನ
ಅಕ್ಕರಿಂದಲಿ ಬಲಗೊಂಬೆ ೧೫

ನನ್ನಯ್ಯ ಹೊನ್ನಯ್ಯ ಕನ್ನದ ಮಾರಯ್ಯ
ಕಿನ್ನರಿ ಬ್ರಹ್ಮಯ್ಯನವರ
ಪನ್ನಗಧರ ಶಿವನೊಲಿಸಿದ ಶರಣರ
ಚೆನ್ನಡಿಗಳಿಗೆರಗುವೆನು ೧೬

ಶಂಕರದಾಸಯ್ಯ ಮರುಳು ಶಂಕರ ಶಿವ-
ಲೆಂಕ ಮಂಚಣ್ಣ ಸರಗೂರ
ಬಂಕಯ್ಯನು ಬಾಚರಸಯ್ಯ ಸುಂಕದ
ಬಂಕಣ್ಣನವರ ಪೊಗಳುವೆ ೧೭

ಸಿದ್ಧರಾಮೇಶ್ವರ ಮರುಳು ಶಂಕರನು ಪ್ರ-
ಸಿದ್ಧ ರೇವಣ ಸಿದ್ಧೇಶ್ವರನ
ಇದ್ದ ಏಕೋರಾಮಿತಂದೆ ಆರಾಧ್ಯರ-
ಗೆದ್ದು ವಂದಿಸಿ ಬೇಡಿಕೊಂಬೆ ೧೮

ಎನ್ನ ಶ್ರೀಗುರು ಪಾಟಳ ಮಠಕೆ ಯತಿ
ಉನ್ನತ ಬಸವಲಿಂಗೇಶ
ಭಿನ್ನವಿಲ್ಲದೆ ಮುಕ್ತಿಯ ಕೊಟ್ಟು ರಕ್ಷಿಸು
ಚೆನ್ನಡಿಗಳಿಗೆರಗುವೆನು ೧೯

ಬಾಣ ಮಯೂರನುದ್ಭಟ ಕಾಳಿದಾಸನು
ಜಾಣನು ರಾಘವಾಂಕನನು
ಕ್ಷೋಣಿಯೊಳಗೆ ಹರೀಶ್ವರದೇವರಂಘ್ರಿಗೆ
ಮಾಣದೆ ನಾನೆರಗುವೆನು ೨೦

ಶಿವಕವಿಗಳ ಬಲಗೊಂಡು ಭುವನದೊಳು
ವಿವರಿಸಿದೆನು ಈ ಕೃತಿಯ
ಭವಹರ ಮಾದೇಶ್ವರನ ಮಹಿಮೆಯನು
ತವೆ ಪೊಗಳ್ವೊಡೆ ಶೇಷಗರಿದು ೨೧

ಆದ್ಯವ ಕಲಿಸಿಯೆನಗೆ ಮೇಲ್ಬುದ್ಧಿಯ
ಶುದ್ಧಾಂಗವಾಗಿ ಪೇಳುವರ
ಇದ್ದುದ ವಂಚನೆ ಮಾಡದ ಶರಣರಿ-
ಗೆದ್ದು ವಂದಿಸಿ ಬಲಗೊಂಬೆ ೨೨

ಹಲಗೂರ ಅಕ್ಕಸಾಲೆಯ ದೇಪಣ್ಣನ
ಸಲೆಸುತ ಗುರುಸಿದ್ದನಿಗೆ
ಒಲಿದು ಮಾದೇಶ್ವರ ವರವ ಕೊಡಲು ನಾನು
ನಲಿದು ಪೇಳಿದೆನು ಈ ಕೃತಿಯ ೨೩

ಸತ್ಯಮಂಗಲವ ಭೂಪತಿಯ ಸಿಂಹಾಸನ
ಗುತ್ತಾಲತ್ತೂರವೃತ್ತಿನಲಿ
ಮತ್ತೆ ಎಸೆವ ಮಿಣ್ಣದ ಗುರುಸಿದ್ಧನು
ವಿಸ್ತರಿಸಿದನು ಈ ಕೃತಿಯ ೨೪

ಬೇಸರುದೋರುವ ಕಥೆಯಲ್ಲ ಶಿಶುವಿನ
ಲೇನಾದ ಸವಿನುಡಿಯಂತೆ
ಈಶನು ವರವ ಕೊಡಲು ಗುರುಸಿದ್ಧನು
ಮಿಾಸಲಾಗಿಯ ವೇಳಿದನು ೨೫

ನಾನುಸುರಿದ ನುಡಿ ಜೇನು ಸಕ್ಕರೆ ಪಾಲು
ಮಾವಿನ ಹಣ್ಣ ಸವಿದಂತೆ
ಮಾನಿನಿಯರ ಕುಡಿನೋಟದಂತೆಸೆವುದು
ಭಾನುಪ್ರಕಾಶದಂತಿಹುದು ೨೬

ಕಸ್ತೂರಿ ಪುಣುಗು ಜವಾದಿ ಆಗಿಲುಗಂಧ
ವಿಸ್ತರಿಸುವ ಪರಿಯಂತೆ
ಉತ್ತಮ ಸವಿನುಡಿಯಂತೆ ಈ ಕಥೆಯನು
ಬಿತ್ತರಿಸುವೆನು ಅರ್ತಿಯಲಿ ೨೭

ಆವ ಗುಣವು ಎಂದರಿಯೆನು ನಾನಿದ
ದೇವರು ಕೊಟ್ಟ ವರದಲಿ
ಭಾವಿಸೆ ಪೇಳಿದೆನೀ ಸಾಂಗತ್ಯವ
ಕೋವಿದರೊಲಿದು ಲಾಲಿಪುದು ೨೮

ಶಬ್ದವಲಂಕಾರ ನವರಸದಲ್ಲಿವ
ನುದ್ಧರಿಸಿದನೆನ್ನದಿರಿ
ಇದ್ದಂತೆ ಮಾದೇಶ್ವರನ ಮಹಿಮೆಯನು
ಶುದ್ಧಾಂಗವಾಗಿ ಪೇಳುವೆನು ೨೯

ಬಲ್ಲೆನೆಂಬಹಂಕಾರವಿಲ್ಲವು ಎನ್ನಲಿ
ಸೊಲ್ಲಿನೊಳಗೆ ತಪ್ಪಿದಡೆ
ನಿಲ್ಲದೆ ರಸಿಕರು ತಿದ್ದಿಕೊಂಬುದು ಎನ್ನ
ಒಳ್ಳಿದನೆನಿಸಿ ಮೆರೆವುದು ೩೦

ಚಪ್ಪನ್ನೈವತ್ತಾರು ದೇಶದೊಳು ಮು
ತ್ತೊಪ್ಪುವ ಬೇಡಗಂಪಣವು
ತಪ್ಪದೆ ರಾಜ್ಯವನಾಳುವ ದೊರೆಯೆಸೆ-
ದಿಪ್ಪನು ಜನ ಕೀರ್ತಿಯಿಂದೆ ೩೧

ಕನ್ನಡ ದೇಶದ ಕಾವೇರಿ ತೀರದಿ
ಪೊನ್ನಾಚ ಬೆಟ್ಟದೊತ್ತಿನಲಿ
ಉನ್ನತವಾಗಿಹ ನಡುಮಲೆಯೊಪ್ಪುವು-
ದಿನ್ನದನೇನಹೇಳುವೆನು ೩೨

ಆ ನಾಡೊಳಗಾಲಂಬಾಡಿಯೆಂಬುದು
ತಾನೆಸೆದಿಹುದು ಅರ್ತಿಯಲಿ
ಕ್ಷೋಣಿಪಾಲಕರು ಪ್ರಜೆಯ ಪಾಲಿಸಿಕೊಂಡು
ದಾನದಿಂದಾಳುತ್ತಲಿಹರು ೩೩

ತೆರೆ ಹೊರೆ ಸುಂಕ ಶೋಧಿಕೆಯಿಲ್ಲ ಜನರೊಳು
ಬಿರುನುಡಿಯಿಲ್ಲ ಮತ್ತಲ್ಲಿ
ಅರಿಕೆವುಳ್ಳವರಲ್ಲದೆ ಆ ರಾಜ್ಯದಿ
ಮರೆದಿಹ ಮನುಜರಲ್ಲಿಲ್ಲ ೩೪

ದಾನ ಧರ್ಮವು ಜ್ಞಾನವುಳ್ಳವರಲ್ಲದೆ
ಹೀನಮಾನವರು ವರ್ಜಿತವು
ಏನ ಹೇಳುವೆ ಮಾದೇಶ್ವರನ ಮಹಿಮೆಯನು
ಆ ನಾಡೊಳಗೆ ಮೆರೆವುದು ೩೫

ಎಲ್ಲರು ಗುಣಯುತರೆಲ್ಲರು ದಾನಿಗ
ಳೆಲ್ಲರು ಶಿವನ ಪೂಜಕರು
ಎಲ್ಲರು ಭಯಭಕ್ತಿ ಜಂಗಮಸೋಹಿಗ-
ಳಲ್ಲದೆ ಬಿರುಬರಲ್ಲಿಲ್ಲ ೩೬

ಆಡಿದ ಮಾತಿಗೆ ಮಾದೇಶ್ವರನ ಮೇಲೆ
ಮಾಡುವರಾಣೆಯ ಜನರು
ನಾಡಾಡಿ ದೇವರಂತಲ್ಲವೀ ಜಗಕೆಂದು
ಬೇಡಿಕೊಂಬರು ಬೇಗದಲಿ ೩೭

ಬಸುರಿ ಬಾಣತಿಯರು ಶಿಶುವ ಮುದ್ದಾಡುವ
ಶಶಿಮುಖಿಯರು ಒಪ್ಪಿಯಿಹರು
ಅಸಿಯಳು ಬಂಜೆ ಬರಡಿಯೆಂಬ ನುಡಿಗಳ
ಘಸಣೆಯಿಲ್ಲವು ಸೀಮೆಯಲಿ ೩೮

ಅಲ್ಲಲ್ಲಿ ಮೊರಡಿಯು ಅಲ್ಲಲ್ಲಿ ಹಳ್ಳವು
ಅಲ್ಲಲ್ಲಿ ತುರುಮಂದೆಗಳು
ಅಲ್ಲಲ್ಲಿ ತರುಗಳು ಅಲ್ಲಲ್ಲಿ ಕಮರಿಯು
ಅಲ್ಲಲ್ಲಿ ಕಲ್ಲೆಸೆದಿಹುದು ೩೯

ಕಂಬಳಿ ಕೊಡಲಿ ಕಾಲಿಗೆ ಯಕ್ಕಡಮೆಟ್ಟಿ
ಸಂಭ್ರಮದಲಿ ಕೋಲುವಿಡಿದು
ಸಂಬಳ ಮೂರುಹೊನ್ನಿನ ಜೀತಕಾರರು
ಯಿಂಬಿನೊಳ್ ತುರುವು ಕಾತಿಹರು ೪೦

ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ
ನೆಟ್ಟಕೊಂಬಿನಕಾರಿ ಜಾಲ
ದಿಟ್ಟಿಸಿನೋಡುವ ಪಶುಗಳು ಎಸೆವವು
ಪಟ್ಟೆಯ ಸೀರೆಯುಂಡವಲು ೪೧

ಎಳಹುಲ್ಲ ಮೇಯುಕೊಂಡಿಳಿಪವು ಬೆಟ್ಟವ
ತಿಳಿನೀರ ಕುಡಿಯುತಲರ್ತಿಯಲಿ
ಘಳಿಲಾಗೆ ಬಂದು ತಮ್ಮಯ ಕರುಗಳಿಗೆ ಮು
ತ್ತೊಲಿದು ಮೊಲೆಯ ಕೊಡುತಿಪವು ೪೨

ಕರಿನಾರು ಅಂಡೆವಿಡಿದು ಜೀತಕಾರರು
ಕರುವಿಂಗೆ ಮರುಸೋರನಿತ್ತು
ಹೊರುವರು ಹಾಪೆಗಳೊಳು ಹಾಲನು ಬೇಗ
ನೆರೆ ಜಾಣೆ ಒಡತಿ ಇದ್ದೆಡೆಗೆ ೪೩

ಹಾಲನುಕಾಸಿ ಹೆಪ್ಪಿಟ್ಟು ಮೊಸರಕಡೆ-
ಗೋಲುಪಿಡಿದು ಕಡೆಯುಂದು
ಬಾಲೆಯರಿಗೆ ಬುದ್ಧಿಯ ಹೇಳುತ ತಾನು
ಲೋಲಾಕ್ಷಿಯರು ೪೪

ನಡುಬಳುಕುತ ಕಡೆಗೋಲು ಪಿಡಿದುಕೊಂಡು
ಮೃಡ,ಮಾದೇಶ್ವರ ನಡಿಗೆ
ದೃಢದಿಂದ ಶರಶೇಂದು ಕಡೆವರು ಮೊಸರನು
ಮಡದಿಯರೇನ ಹೇಳುವೆನು ೪೫

ಇಂತೊಪ್ಪುವ ದೇಶದೊಳು ನೆಲಸಿಪ್ಪುದು
ಕಂತುಹರನ ನಡುಮನೆಯು
ಅಂತಿಂತೆಂದು ಪೇಳುವರೆನಗಳವಲ್ಲ-
ನಂತ ಜಿಹ್ವೆಯ ಶೇಷಗರಿದು ೪೬

ಆವಪರಿಯಲಿ ಈದೇವರ ಮಲೆಯನು
ಭಾವಸತಿಳಿದು ಪೇಳುವೆನು
ತ್ರೀವಿಧ ತರು ಖಗಮೃಗ ದಾಶ್ರಯವನು
ನೀವಿದ ಕೇಳಿಬಲ್ಲವರು ೪೭

ಪಾಸರೆಗಲ್ಲು ಹಾವಸೆಗಲ್ಲು ತಪಸಿಗೆ
ಲೇಸಾದ ಕೋಡುಗಲ್ಲುಗಳು
ವಾಸವಾಗಿಹಕಲ್ಲು ಕವಿಬರಗಲ್ಲ ವಿ-
ಲಾಸವನೇನ ಹೇಳುವೆನು ೪೮

ತರುಲತೆಗಡುವು ಹೆಮ್ಮೆಳೆ ಸುರನದಿಯಂತೆ
ಹರಿವ ಹಳ್ಳಗಳು ಅಲ್ಲಿಹವು
ಸರಿಗಾಣೆ ಮಲೆಯೊಳಗಿಹ ಕುಜಜಾತಿಯ
ಪರಿಯ ವರ್ಣಿಸುವೆ ನರ್ತಿಯಲಿ ೪೯

ಬನ್ನಿ ಬಕುಳ ಸುರಹೊನ್ನೆ ಚೆನ್ನಂಗಿಯು
ಹೊನ್ನೆಯ ಮರವೊಪ್ಪುತಿಹುದು
ಉನ್ನತವಾಗಿಹ ಆಲ ಅರಳಿ ಬೇವು
ಯಿನ್ನು ಹೇಳುವೆನು ಬಲ್ಲಂತೆ ೫೦

ಹಾಲೆ ಹಲಸು ಅತ್ತಿ ಬೇಲಬೆಜ್ಜಲು ಚಿಲ್ಲ
ಜಾಲ ತಮುಕ ಅರನೆಲ್ಲಿ
ಮೇಲೆನಿಸುವ ಮಾವು ಆಲದಮರಗಳ
ನಾಲೆಸದಿಹವು ಅಲ್ಲಲ್ಲಿ ೫೧

ಯತ್ತಗ ಯಲಚಿ ಕಗ್ಗಲಿ ಕಾರಾಚವು
ಮುತ್ತುಗ ಅರಲೆಯ ಮರನು
ಎತ್ತನೋಡಿದಡತ್ತ ಬಿಲ್ಲವತ್ತೆಯ ತರು
ಮೊತ್ತವೆಸೆದವು ಅಲ್ಲಲ್ಲಿ ೫೨

ಪಾದರಿ ಪಾರಿಜಾತವು ವನಸಂಪಗೆ ತೀ
ವಿಹ ಅಗಿಲು ಚಂದನವು
ದೇವದಾವರೆ ಬೆಟ್ಟದಾವರೆ ಮೊದಲಾಗಿ
ಭೂಧರದೊಳಗೆ ಒಪ್ಪಿಹವು ೫೩

ತಡವೆ ಬೆಂಡುಗ ಕಾವಮರ ಕಂಚಾಳವು
ಎಡೆವಿಡದಿಹ ಪುತ್ರಜೀವಿ
ಪೊಡವಿಗೆ ಉನ್ನತವಾಗಿ ಬೆಳೆದ ತೆಂಗು
ಅಡಕೆಯಮರ ಯೆಸೆದಿಹವು ೫೪

ಕಿತ್ತಳೆ ನಿಂಬೆ ಹೇರಳೆ ದಾಳಿಂಬವು
ಮೊತ್ತವಾಗಿಹವು ಅಲ್ಲಲ್ಲಿ
ಇತ್ತರವಲಿ ಕವಳಿಯ ತೋಟವು ಅದು
ರತ್ರಿಯನೇನ ಹೇಳುವೆನು ೫೫

ಹೂರಹುಣಿಸೆ ಬೂರತಾರೆ ಲಿಂಬಟೆದ್ರಾಕ್ಷಿ
ಪಾರಿವಾಳವು ಬೆತ್ತಬಿದಿರು
ತಾರೆ ಗೊರವೆ ಸೋಮೆಬಾಗೆ ಹಿಪ್ಪೆಯತರು
ಗೇರ ಮರಗಳು ಅಲ್ಲಿಹವು ೫೬

ಕಕ್ಕೆಕಳ್ಳಿಯು ಬಿಕ್ಕೆಯಕ್ಕೆಯಲಚ ಬೇವು
ಲೊಕ್ಕಿಯು ತಬಳಿ ತಬ್ಬಾಲಿ
ಮಿಕ್ಕ ಸಿಂದವು ಕರಿಬೇವು ಮಾಮರಗಳು
ಇಕ್ಕೆಲವಲಿ ಯಸೆದಿಹುದು ೫೭

ಉಡುವು ಹೆಬ್ಬಾವು ಮುಂಗುರಿ ದಾರುವಂದಿಯು
ಕಡವೆ ಕೆನ್ನಾಯಿ ಕೊಂಡಗುರಿಯು
ಬಿಡದೆ ಮರವನೇರಿಕೊಂಡಿಹ ಮುಸುವನು
ಗಡಿಯಿಲ್ಲ ಕಾಂತಾರದಲಿ ೫೮

ಸಾರಗ ನರಿ ಮತಿನರಹ ಹೆಬ್ಬುಲಿ ಮದ
ನಾರಣ ಕಾಡಕೋಣಗಳು
ಭೇರುಂಡ ಗಜ ಸಿಂಹ ಶರಭ ಶಾರ್ದೂಲವು
ತೋರಿಹವಾ ವಿಪಿನದಲಿ ೫೯

ಝಲ್ಲಿ ಮೃಗವು ಹುಲ್ಲೆಮೊಲನು ಬೆಳ್ಳಿಲಮತ್ತೆ
ಅಲ್ಲಿ ಭಲ್ಲೂಕ ಮಾರ್ಜಾಲ
ಅಲ್ಲಲ್ಲಿ ಪುಣುಗಿನಬೆಕ್ಕು ಮರೆಯೊಳು ಮ
ತ್ತೆಲ್ಲೆಡೆಯೊಳು ಚರಿಸುವವು ೬೦

ಹಸುಬ ಹಂಗನು ಬಾವುಗೆ ಹಾಲುಹಕ್ಕಿಯು
ಕುಶಲಡಿಂದುಲಿವ ಮಣಿಯನು
ಹಸನಾಗಿ ಶಕುನವ ಪೇಳ್ವ ಪಕ್ಷಿಗಳು ಮ-
ತ್ತೆಸೆದವು ಆ ಮರಯೊಳಗೆ ೬೧

ಗೊರವ ಗೌಜನು ಕಾಡೆ ಗಿಡಗ ಸಬಲಮುಂಡೆ
ಹರಡೆ ಕೆಂಬೋತು ಪಾರಿವಂಕ
ಗರುಡ ಸಾಳುವ ಜಕ್ಕವಕ್ಕಿ ಚಕೋರಿಯು
ಪರಿಯನಿನ್ನೇನ ಪೇಳುವೆನು ೬೨

ಚಿಲುಕುಲಿ ಪಿಕಗಳು ಸೋರೆ ಕಬ್ಬಕ್ಕಿಯು
ಬಲಿವನವಿಲು ಮೀನ್ಬುಲಿಗ
ಕೆಲವಪಾರಿವ ಗರುಸಕ್ಕಿ ಟಿಟ್ಟಿಭ ಬೆಣ್ಣೆ
ದಲೆಗನು ಕುಟಕನಲ್ಲಿಹವು ೬.

ಸಿದ್ಧರಸವು ಮರುಜೀವಣೆ ಕರಿಯನೆಲ್ಲಿ
ಇದ್ದವು ವತ್ಸನಾಭಿಗಳು
ಶುದ್ಧನಿರ್ವಿಷವು ಹಲವು ಮೂಲಿಕೆಗಳು
ಮದ್ದುಂಟು ಆ ಮಲೆಯೊಳಗೆ ೬೪

ಇಂತುಮೆರೆವ ನಡುಮಲೆಯೊಂದು ಪೊಪ್ಪಿತು
ಸಂತೋಷಗಿಂದ ಲರ್ತಿಯಲಿ
ಕಂತುಹರನ ಧ್ಯಾನಿಸುವ ತಪಸಿಗಳು
ಮುಂತಾಗಿ ನೆಲಸಿ ಅಲ್ಲಿಹರು ೬೫

ಆದಿವಿಡಿದು ನಾನು ಪೇಳುವೆ ಬಲ್ಲಂತೆ ಅ
ನಾದಿಯ ಮಹಿಮೆಯನರಿಯೆ
ಭೇದವಿಲ್ಲದೆ ಜಂಗಮ ರೂಪನುತಾಳಿ ವಿ
ನೋದದಿ ಚರಿಸಿದ ಮಲೆಯ ೬೬

ಕೆಂಜೆಡೆ ಫಣಿಭರಣವು ರುಂಡಮಾಲೆಯು
ನಂಜುಗೊರಳು ಕಪ್ಪುಳ್ಳ
ರಂಜಿಸುತಿಹ ಪುಲಿಚರ್ಮಲಾಕುಳಚಿತ್ತ
ಕುಂಜರದನುಜಮರ್ದನನು ೬೭

ಆಡುವ ಮರುಳುತಂಡವ ಕೂಡಿಕೊಂಡು ತಾ
ನೋಡಿದ ಮಲೆಯ ಮಂಜಿರವ
ಆಡುವ ನವಿಲು ಕೋಗಿಲೆ ಮೃಗಸಹವಾಗಿ
ರೂಢೀಶ ನಡೆದನರ್ತಿಯಲಿ ೬೮

ಪಯಣಗತಿಯಲಿ ಬಂದರು ಆನೆಮಲೆಗಾಗಿ
ವಿವರಿಸಿ ನೋಡಿದರಲ್ಲಿ
ಭವಹರನಲ್ಲಿಯಿರದೆ ಮತ್ತೆಬಂದರು
ಭುವನದಿ ಮೆರೆವ ಕಾನ್ಮಲೆಗ ೬೯

ಅಲ್ಲಿಂದ ತೆರಳಿಯೆ ಮೆಲ್ಲನೆ ನಡವುತ
ನಿಲ್ಲದೆ ಗುತ್ತಿಯಮಲೆಗೆ
ಎಲ್ಲದೇವರುಗಳ ವಲ್ಲಭ ಬಂದರು
ಅಲ್ಲಿಯೆಸೆವ ಜೇನ್ಮಲೆಗೆ ೭೦

ಅಚ್ಚರಿಯಾಗಿ ಹೆಚ್ಚಿದ ಮರುಳನು ಕೂಡಿ
ವುಚ್ಚರಿಸುವ ಗಿಳಿಸಹಿತ
ಮಚ್ಚಿದ ಖಗಮೃಗಸಹಿತ ನಡೆದನತ್ತ
ಪಚ್ಚೆನೀಲಿಯ ಮಲೆಗಾಗಿ ೭೧

ಸುಳಿವ ಪಾವನಮೂರ್ತಿ ಯಿಳೆಯೊಳು ಚರಿಸುತ
ತುಳುನಮಲೆಯ ನೋಡಿದನು
ತಳುವಿಲ್ಲದೆ ಪದ್ಮಮಲೆಗಾಗಿ ಬಂದರು
ಬಳಲುತ ಅಲ್ಲಿ ಬೇಗದಲಿ ೭೨

ದೇವರು ಬರುತಕಂಡರು ಗೌಳಮಲೆಯನು
ಭಾವಿಸಿ ನೋಡಿದರಿಲ್ಲಿ
ಕಾವನವೈರಿ ಪಾವನಮೂರ್ತಿ ಬಂದರು
ಯಿಾವ ಚೆರಮಮಲೆಗಾಗಿ ೭೩

ಅರ್ತಿಯಿಂದಲಿ ನೋಡಲು ಕಾಣಿಸಿದವು
ಚಿತ್ತಜವೈರಿ ಬೇಗದಲಿ
ಮತ್ತಲ್ಲಿಯಿರದೆ ನಡೆದುಬಂದರು ಕೀರ್ತಿ
ವೆತ್ತ ತುಳುವಮಲೆಗಾಗಿ ೭೪

ಎಪ್ಪತ್ತುಯೇಳು ಮಲೆಯನೋಡಿ ಚರಿಸುತ
ಸರ್ಪಭೂಷಣ ಬರುತಿರ್ದ
ವೊಪ್ಪುವ ಗಾಳಿಪೂಜೆಯ ಮಲೆಗಳಪೊಕ್ಕು
ತಪ್ಪದೆ ಮುಂದಕೆ ನಡೆದ ೭೫

ಕಂಜಸಖನ ಶತಕೋಟಿತೇಜ ದೇವರದೇವ
ಮಂಜುಮಲೆಯ ನೋಡಿದನು
ನಂಜುಗೆವರಳ ಶಿವಬಂದನು ನೋಡುತ
ರಂಜಿಪ ತುಳುಮಲೆಗಾಗಿ ೭೬

ಗಾಳಿಪೂಜೆಯಬಿಟ್ಟು ನೀಲಗಿರಿಗೆ ಬಂದು
ಭಾಳಲೋಚನ ನೆಲಸಿದನು
ಕಾಲಹರನಮುಂದೆ ವೂಲಿವಮರುಳು ಸಹ
ಲೀಲೆಯಿಂದೊಲಿದ ನರ್ತಿಯಲಿ ೭೭

ಮಲೆಯೊಳಗಿರ್ದ ಸೋಲಿಗ ಕಾರ್‍ಯೈಯ್ಯನು
ನೆಲದೊಳಗಣ ನಿಧಿಯಂತೆ
ಸಲೆಮುನ್ನಲರಿಯನು ಹೊಲಬು ಗಾಣಿಸಿಕೊಳ್ಳ
ನೆಲಸಿರುತಿಹನು ಅರ್ತಿಯಲಿ ೭೮

ಆಡುತಿರ್ದನು ಮಕ್ಕಳಕೂಡೆ ಕಾರಯ್ಯ
ನೋಡಿದ ನೊಂದೆಡೆಯೊಳಗೆ
ಕೂಡಿಹ ಮರುಳು ಕೊಂಡಾಡುವ ಭೂತವು
ರೂಢಿಗೊಡೆಯ ನಿರುತಿರ್ದ ೭೯

ಹಾಸರೆಗಲ್ಲಿನ ಮೇಲೊರಗಿರ್ದನು
ಈಶನ ರೂಪ ಕಾಣುತಲಿ
ನೇಸರಗಂಡ ತಿಮಿರದಂತಜ್ಞಾನವು
ಆಸಮಯದೊಳು ತೊಲಗಿತು ೮೦

ಕಂಡ ಕಾರೈಯ್ಯ ಉದ್ದಂಡ ಹರನರೂಪ
ಮುಂಡೆಗೆ ಕೈಯೆತ್ತಿ ಮುಗಿದು
ದಿಂಡುಗೆಡೆದು ಬಿದ್ದು ಬೇಡಿಕೊಂಡನು ಆಗ
ಮಂಡಲದೊಡೆಯನ ಬೇಗ ೮೧

ತಂದು ಮಲೆಯೊಳಿರ್ದ ಗೆಣಸ ಕಾರೈಯ್ಯನು
ಚೆಂಪದಿಂದಲಿ ಪಾಕವಮಾಡಿ
ಇಂದುಧರನ ಮುಂದೆ ಯಿರಿಸಿ ಭಕ್ತಿಯಲೆನ್ನ
ತಂದೆ ನೀಸಲಹು ಬೇಗವಲಿ ೮೨

ಎಂದಮಾತಿಗೆ ಶಿವಬಂದು ಸಲಿಸಿದನು
ಇಂದೆಮ್ಮ ಪೂಜೆ ಮಾಡೆನಲು
ತಂದನು ಪತ್ರೆಪುಷ್ಪವನು ಕಾರೈಯ್ಯನು
ಇಂದುಧರನ ಪೂಜೆಗೆಂದು ೮೩

ಪೂಜಿಸಿದನು ಕಾರ್ಯೈಯ್ಯನು ಮನಮುಟ್ಟಿ
ಸೋಜಿಗ ಕಂದಗಣಸುಗಳ
ಪೂಜೆಯಿಂದಲಿತಂದು ಒಲಿದು ಪಾಕವಮಾಡಿ
ಮೂಜಗದೊಡೆಯ ಗಿರಿಸಿವ ೮೪

ಕಲ್ಲೆಡೆ ಬೆಳೆವ ಫಲವು ಗೆಣಸುಗಳ ಮು
ತ್ತಲ್ಲಿಯಿರುವ ಹಣ್ಣುಗಳ
ನೆಲ್ಲಿಯಕಾಯಿ ಮುಂತಾದ ಉಪ್ಪಿನಕಾಯ
ಎಲ್ಲವ ಎಡಮಾಡಿದನು ೮೫

ಪನ್ನೀರ ಹಸ್ತಕ್ಕೆರದು ಕೈಮುಗಿದನು
ಎನ್ನಯ್ಯ ಪವಡಿಸುಯೆಂದು
ಬಿನ್ನಹಮಾಡಿ ಕಾರ್ಯಯ್ಯನು ಬೇಗದಿ
ತನ್ನ ನಿಳಯಕಾಗಿ ಬಂದ ೮೬

ಆಶ್ಚರಿಯಾಗಿದೆ ಕಾರ್ಯೈಯ್ಯನ ಭಕ್ತಿ
ಸಿಸ್ತ್ಯೈಸಿಕೊಂಡು ನೋಡುತಮು
ಉತ್ಸಾಹದಿಂದ ಕೊಂಡಾಡಲು ಸೂರ್ಯನು
ಪಶ್ಚಿಮಾದ್ರಿಯ ಮರೆಗೊಂಡ ೮೭

ಹಲವು ದಿನವು ಯಿಾಪರಿಯಲಿ ಪೂಜಿಸಿ
ನಲಿದು ಕಾಡೆಮ್ಮೆಯ ಕಾಯ್ದು
ಒಲಿದು ಕರೆದು ನೊರೆಹಾಲನು ನಲಿನಂದು
ಒಲಿದು ನೀಡಿದನು ಕಾರ್ಯೈಯ್ಯ ೮೮

ತನ್ನ ಪೂಜಿಸಿದ ಕಾರ್ಯೈಯ್ಯನ ನೆರೆಮೆಚ್ಚಿ
ಮನ್ನಣೆಯನು ಮಾಡಿದನು
ಉನ್ನತವಾಗಿಹ ಮಲೆಯು ಮಂಜೀರದಿ
ಚೆನ್ನಮಾದೇಶ ನೊಪ್ಪಿರ್ದ ೯೪

ಬೋಳಿಯೊಳಗೆ ಯಿರುಯೆಂದು ಕಾರ್ಯೈಯ್ಯಗೆ
ಹೇಳಿದ ನತಿಮುದದಿಂದ
ಆಳೋಚಿಸಿ ನಡುಮಲೆಯೊಳು ನೆಲೆಸಿದ
ಭಾಳಲೋಚನನು **ಮಾದೇಶ** ೯೫





ಶ್ರೀ ಕ್ಷೇತ್ರದಲ್ಲಿರುವ ಸಾಲೂರು ಮಠದ ಗದ್ದಿಗೆಗಳು



ಶ್ರೀ ಕ್ಷೇತ್ರದಲ್ಲಿರುವ ಸಾಲೂರು ಮಠ



ಶ್ರೀ ಮಾದೇಶ್ವರ ಕ್ಷೇತ್ರದಲ್ಲಿರುವ
**ಶೇಷಣ್ಣೊಡೆಯರ ಗದ್ದಿಗೆ**



ಶ್ರೀ ಮಾದೇಶ್ವರ ಕ್ಷೇತ್ರದಲ್ಲಿರುವ
**ಅಂತರಗಂಗಾ ತೀರ್ಥ**



ಶ್ರೀಮಾದೇಶ್ವರರ ಪವಾಡದ ರಾಗಿಕಲ್ಲು
ಇಂದಿಗೂ ಪೂಜಾರ್ಹವಾಗಿದೆ
ಸುತ್ತೂರು ಸೋಮೇಶ್ವರ ಗುಡಿಯಲ್ಲಿದೆ.



ಶ್ರೀ ಮಾದೇಶ್ವರನಿಗೆ ಪ್ರಿಯವಾದ ಹುಲಿಯ ವಾಹನ



ಶ್ರೀ ಸುತ್ತೂರು ವೀರಸಿಂಹಾಸನ ಮಠದಲ್ಲಿರುವ

**ಶ್ರೀ ಮಾದೇಶ್ವರ ಗದ್ದುಗೆ**



ಶ್ರೀ ಮಾದೇಶ್ವರರು ಬಾಲ್ಯದಲ್ಲಿ ಕಲಿವು ಕಲಿತಿದ್ದ
ಸುತ್ತೂರು ವೀರಸಿಂಹಾಸನ ಮಠದಲ್ಲಿರುವ
**ಶ್ರೀ ಸೋಮೇಶ್ವರ ದೇವಾಲಯ**



**ರುದ್ರಾಕ್ಷಿ ಮಂಟಪ ಉತ್ಸವದಲ್ಲಿ**
ಶ್ರೀ ಗುರು ಮಾದೇಶ್ವರರು



ಶ್ರೀ ಮಾದೇಶ್ವರ ದೇವಸ್ಥಾನದಲ್ಲಿರುವ
**ಬೆಳ್ಳಿಯ ವೃಷಭ ವಾಹನ**



ಪ್ರಭುಲಿಂಗನ ಬೆಟ್ಟದಲ್ಲಿರುವ
**ಶ್ರೀ ಪ್ರಭುದೇವರ ದೇವಸ್ಥಾನ**

## ಲಿಂಗವ ಕಂಡ ಸಂಧಿ



ಶ್ರೀ ಪಾರ್ವತಿಯ ಪ್ರಿಯ ಭಕ್ತರ ಬಂಧುವೆ
ಶ್ರೀ ಪತಿಸುತ ಮರ್ದನನೆ
ಶ್ರೀ ಪರಮೇಶ್ವರ ಕೊಡು ಬೇಗ ಮತಿಯನು
ತಂದೆ ತೋಂಟದ ಸಿದ್ಧಲಿಂಗ ೧

ವಂದಿಸಿ ಬೇಡಿಕೊಂಬೆನು ನಿಮ್ಮ ಚರಣವ
ಸಂದೇಹವಿಲ್ಲದೆ ನಾನು
ಕುಂದು ಬಾರದಹಾಗೆ ಕೊಡುಬೇಗ ಮತಿಯನು
ತಂದೆ ತೋಂಟದ ಸಿದ್ಧಲಿಂಗ ೨

ಕತ್ತರಿ ಕಡುಸೀಗೆ ಹೆಮ್ಮೆಳೆಗಳು ಮತ್ತೆ
ಇತ್ತರವಲ್ಲಿ ಹಬ್ಬಿಹವು
ಭಕ್ತರದೇವನು ನೆಲಸಿರ್ದ ಮಹಿಮೆಯ
ವೃತ್ತಾಂತವ ಪೊಗಳುವೆನು ೩

ಎತ್ತನೋಡಿದಡತ್ತ ಸುತ್ತಿಕೊಂಡಿಹ ಬಳ್ಳಿ
ಕತ್ತರಿಗಿಡು ಹೆಮ್ಮೆಳೆಯು
ಯಿತ್ತರದಲಿ ಹೋಗಬಾರದ ರಾವಲಿ
ಚಿತ್ತಜವೈರಿ ನೆಲೆಸಿದನು ೪

ಮಾರಾರಿ ನೆಲೆಸಿಹುದಾರುಮರಿಯರಲ್ಲಿ
ಧೀರನಳಿಯ ಬಿಲ್ಲೈಯ್ಯನಿಗೆ
ಏಳು ಯೇರಿಗೆ ರಾಯಣ್ಣ ಭೂಮಿಯಕೊಡೆ
ಸಾರಿ ಬಂದರು ಜೀತದವರು ೫

ಏಳುಮಂದಿಯು ಮಚ್ಚು ಕೊಡಲಿ ಏಡಿದುಕೊಂಡು
ತಾಳಿಂವ ಹುಯಿವರು ಗಿಡುವ
ಭಾಳಲೋಚದ ಮರವೆಯನಿಕ್ಕಿ ಕಡಿದರೆ
ಕೇಳದೆ ಮೈ ಮರೆದಿಹರು ೬

ಮಡದಿಯರೇಳುಮಂದಿಯು ಬೋನವಹೊತ್ತು
ಸಡಗರದಿಂದ ಲೈತಂದು
ಬಿಡದೆ ನೀಡುವೆನೆಂದು ಮಡದಿ ಒಂದೆಡೆಯೊಳು
ನುಡಿಸಿದರವರು ಬೇಗದಲಿ ೭

ಅರಿಯರು ಹಲಕಾಲವು ಲಿಂಗನ
ಕುರುಹ ನರಿಯದೆ ಮಲೆಯೊಳು
ನೆರೆಜಾಣ ಕುರುಬ ಒಕ್ಕಲಿಗ ಬಿಲ್ಲೈಯ್ಯನು
ಮರೆಯದೆ ಬೇಂಟೆ ವ್ಯಸನದಿ ೮

ಬಿಲ್ಲೈಯ್ಯ ತಾನು ಬೇಂಟೆಗೆ ಪೊರಮಟ್ಟನು
ಬಲ್ಲಿದ ನಾಯಿಗಳ್ ಸಹಿತ
ಅಲ್ಲಲ್ಲಿ ಮೃಗ ಮರೆ ಕಡವೆ ನಾರಂಗವು
ನಿಲ್ಲದೆ ಕೊಂದನರ್ತಿಯಲಿ ೯

ಕಡವೆಯ ಮಾಂಸವ ಬಿಡದೆ ಅಡ್ಡೆಯ ಕಟ್ಟಿ
ತಡೆಯದೆಲ್ಲರು ಹೊತ್ತುತರಲು
ಕಡುಬೇಗದಿಂದೊಬ್ಬ ಮಡದಿ ತಾನಿಂತೆಂದು
ನುಡಿದಳು ಒಂದು ಚೋದ್ಯವನು ೧೦

ಏನೆಂದು ಅರಿಯೆವು ಮೌನವಾಗಿರುವುದ
ಜ್ಞಾನಿ ಬಿಲ್ಲೈಯ್ಯ ಕೇಳಿದನು
ನಾನದನೋಡುವೆನೆಂದು ತಾನತಿಬೇಗ
ಭಾನುಪ್ರಕಾಶನಿದ್ದೆಡೆಗೆ ೧೧

ಶಿಲೆಯೊಳು ಪಾವಕನಡಗಿಕೊಂಡಿರುವಂತೆ
ನೆಲದೊಳಗಣ ನಿಧಿಯಂತೆ
ಕಳೆಯುಳ್ಳ ಚಂದ್ರ ಮುಗಿಲು ಮರೆಗೊಂಡಂತೆ
ನೆಲಸಿರ್ದನಾ ಮಲಯೊಳಗೆ ೧೨

ಪರುಷವಿದ್ದೆಡೆ ಲೋಹ ವರಿಸುವ ಪರಿಯಂತೆ
ಪುರುಷನಿದ್ದೆಡೆಗೆ ಆ ಸತಿಯು
ಹರುಷದಲ್ಲಿಯ ಬರುವಂತೆ ಬಿಲ್ಲೈಯ್ಯನು
ಉರಿಗಣ್ಣನೆಡೆಗೈದಿದನು ೧೩

ಹೆಚ್ಚಿಬೆಳೆದ ಕತ್ತರಿ ಕಡುಸೀಗೆಯ
ಮುಚ್ಚಿಂದತರಿಯೆ ಬಿಲ್ಲೈಯ್ಯ
ಅಚ್ಚರಿಲಿಂಗವ ತಾಗಲು ತಾನುತ್ತೆ
ಬೆಚ್ಚಿಬೆದರಿ ಮೈಮರೆದ ೧೪

ಕರಚರಣಗಳು ಬಾರದೆ ಬಿಲ್ಲೈಯ್ಯನು
ಧರೆಯಮೇಲ್ಹೊರಗಿಕೊಂಡಿರ್ದ
ಭರದಿಬಂವಳು ಮಡದಿಯು ಅನ್ನನಾಲೆಯು
ಪುರುಷನ ನೋಡಿ ಚಿಂತಿಪಳು ೧೫

ಕಟ್ಟಿದ ಹರಸಿ ಕಾಣಿಕೆ ಕುಲದೈವಕ್ಕೆ
ಇಟ್ಟಳು ಫಣೆಗೆ ಭಸಿತವ
ಕೆಟ್ಟೆನಿದೇನು ಕಾರಣವೆಂದು ಕರಗಳ
ನೆಟ್ಟೆಯ ಮುರಿದು ಕೇಳಿದಳು ೧೬

ಕಣಿಗಾರ್ತಿ ಪೇಳ್ದಳು ಫಣಿಭರಣೇಶನು
ತ್ರಿಣಯನು ಮಾದೇಶ್ವರನು
ಗುಣವಂತ ಬಿಲ್ಲೈಯ್ಯನಿಗೆ ನಾವು ವೊಲಿದೆವು
ಯಣಿಸನ ಪೂಜಿಸಲೆಂದು ೧೭

ಅತ್ತ ಕಣಿಯಕೇಳಿ ಎಚ್ಚತ್ತುಬಿಲ್ಲೈಯ್ಯ
ಸುತ್ತಹಬ್ಬಿದ ಮೆಳೆಗಳಲಿ
ಕರ್ತುವನರಸಿ ಕಂಡನು ಬೇಗಮುಕ್ತಿಯ
ನಿತ್ತು ರಕ್ಷಿಸುವ ದೇವನನು ೧೮

ಈಶನಕಂಡ ಗೌರಿಯ ಪ್ರಾಣೇಶನ
ಶೇಷಭರಣ ಭೂಷಣನ
ವಾಸವಾಗಿಯ ಮಳೆಯೊಳು **ಮಾ-**
**ದೇಶನ** ಕಂಡ ಬಿಲ್ಲೈಯ್ಯ ೧೯

ಆದಿಯೊಳಗೆ ಬೇಡರ ಕನ್ನಪ್ಪನಿಗೆ ಅ
ನಾದಿಯ ಕಾಳಹಸ್ತಿಲಿಂಗ
ಭೇದವಿಲ್ಲದೆ ಮೆಚ್ಚಿದಂತೆ ಬಿಲ್ಲಯ್ಯಗ
ಮಾದೇಶವೊಲಿದನು ಆಗ ೨೦

ಹಸುಳೆಯ ಮಾತಿಗೆ ಹಾಲಸಲಿಸಿದನು
ವಿಷವ ಕಂಠದಲಿ ಧರಿಸಿದ
ಶಶಿರವಿಗಳ ಎಡಬಲ ಸೂಡಿದಭವನ
ಬಿಸಿಗಣ್ಣನ ಕಂಡನಾಗ ೨೧

ನಂಬಿಗೆ ಹಡಪವಹೊತ್ತನ ಪಡಿಹೊನ್ನ
ಸಂಬಳವನು ಕೊಟ್ಟುಬಂದು
ಇಂಬಿನ ಮೂರುಪುರವ ನೋಡಿ ಸುಟ್ಟನ
ಕುಂಭಿಣಿಯೊಳು ಕಂಡನಾಗ ೨೨

ಪಿಟ್ಟವ್ವೆಗಾಳಾಗಿ ಕಟ್ಟೆಗೆ ಮಣ್ಣನು
ಬಿಟ್ಟಿಯ ಮಾಡಿ ಬಂದವನ
ಬೆಟ್ಟದೊಳಗೆ ನಿಂದು ದೃಷ್ಟವ ತೋರಿದ
ದೃಷ್ಟಿ ಮೂರುಳ್ಳನ ಕಂಡ ೨೩

ಚೆಂದಯ್ಯನಿಗೆ ಮಗನಾಗಿ ನುಲಿಯಹೊಸ್ತ
ಕಂದನಾಗಿಯೆ ಮೊರೆಯೊಂದ
ಸಿಂಧುಬಲ್ಲಾಳನ ಸತಿಯ ಬೇಡಿದವನ
ಬಂದು ಕಂಡನು ಪುಣ್ಯದಿಂದ ೨೪

ಕಾಳಿದಾಸನಿಗೆ ಕಣ್ಣನಿತ್ತವನ
ಚೋಳಗೊಲಿದು ಹೊನ್ನಮಳೆಯ
ಏಳುದಿನವು ಕರೆಯಿಸಿ ದೃಢದೋರಿದ
ಭಾಳಾಕ್ಷನ ಕಂಡನಾಗ ೨೫

ಬಲ್ಲಿದ ಬಾಣನ ಬಾಗಿಲಕಾಯ್ದನ
ಗೊಲ್ಲಾಳಗೊಲಿದು ಹಿಕ್ಕೆಯೊಳು
ನಿಲ್ಲದೆ ನಿಜರೂಪು ಆದನ ಮಲೆಯೊಳ
ಗಲ್ಲಿ ಕಂಡನು ಬಿಲ್ಲಯ್ಯ ೨೬

ಜಯಜಯ ಹರಿಸುರ ನಮಿತ ಪಾದಾಬ್ಜನೆ
ಜಯಜಯ ಭವರೋಗ ಹರನೆ
ಜಯಜಯ ನಡುಮಲೆಯೊಡೆಯ ಮಾದೇಶನೆ
ಜಯಜಯ ಎಂದೆರಗಿದನು ೨೭

ಜಯಜಯ ಭಕ್ತರಪ್ರಿಯ ಮಾಹೇಶನೆ
ಜಯಜಯ ಕರುಣಸಾಗರನೆ
ಜಯಜಯ ರಕ್ಷಾಮಣಿ ಪರುಷದಕಣಿ
ಜಯಜಯ ಎಂದು ನಮಿಸಿದನು ೨೮

ಎಂದು ಸ್ತೋತ್ರವಮಾಡೆ ಇಂದುಧರನು ಮೆಚ್ಚಿ
ಯೆಂದನು ಬಿಲ್ಲಯ್ಯನಿಗೆ
ಸಂದೇಹವಿಲ್ಲದೆ ಗಂಧ ಪುಷ್ಪಗಳಿಂದ
ಇಂದು ನಮ್ಮನು ಪೂಜೆಮಾಡು ೨೯

ಒಲಿದು ಬಿಲ್ಲೈಯ್ಯಗೆ ಮಲಹರ ಮಾದೇಶ
ನಲಿದು ಸುಜ್ಞಾನವ ಕೊಡಲು
ನಿಲ್ಲದೆ ಲಿಂಗವ ಧರಿಸೆಂದು ಗೌರಿಯ
ವಲ್ಲಭ ಕೃಪೆಯಿತ್ತನಾಗ ೩೦

ಧರೆಯೊಳಗೆಸೆವ **ಕುಂತೂರ ಮಠದ ಘನ**
ಸಿರಿಯು ವರ್ಣಿಸಲಳವಲ್ಲ
ಹರನರೂಪನುತಾಳಿ ಗುರುವಾಗಿ ಮುಕ್ತಿಯ
ಭರದಿಂದ ಇತ್ತು ರಕ್ಷಿಪನು ೩೧

ಇಂತಿರುತಿಹ ಗುರುವನು ತಾ ಕಂಡು ನಿ
-ಶ್ಚಿಂತನೆ ನಿರ್ಮಲಾತ್ಮಕನೆ
ಕಂತುನಾಶನ ವಪ್ಪಂತ ಲಿಂಗವನಿತ್ತು
ಸಂತೋಷದಿಂದ ಸಲಹೆನಲು ೩೨

ಆಗಮ ಶಾಸ್ತ್ರದಿಂದಲಿ ಪಂಚಕಳಶವ
ಬೇಗದಿಂ ಗುರುಪಾದವಿಡಿದು
ನೀಗಿದ ಭವಬಂಧನವ ಬಿಲ್ಲೈಯ್ಯನಿ
-ಗಾಗ **ಲಿಂಗವ ಧರಿಸಿದರು** ೩೩

ಲಿಂಗವಧರಿಸಿಕೊಂಡಾಗಮವಿಡಿದು ಸ
-ರ್ವಾಂಗದಿ ಭಸಿತ ರುದ್ರಾಕ್ಷಿ
ಕಂಗಳು ಮೂರುಳ್ಳ ಮಾದೇಶ್ವರನಿಗೆ
ಒಂಗದೆ ಕರವ ಮುಗಿವನು ೩೪

ನಿಮ್ಮಪೂಜೆಯ ಮಾಡುವ ಕ್ರಮವಾವುದು
ಗಮ್ಮನೆ ಕೃಪೆಯ ಮಾಡೆನಲು
ನಮ್ಮನು ಉಂಗುಷ್ಟದಲಿ ಪೂಜೆಮಾಡೆಂದು
ನಿರ್ಮಳಮೂರ್ತಿ ಬೆಸಸಿದನು ೩೫

ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ಪರಿಮಳವುಳ್ಳ ಪುಷ್ಪಗಳ
ಇರುವಂತಿಗೆ ಮಡಿವಾಳ ಪಚ್ಚೆಯತೆನೆ
ಭರದಿಂದ ತಂದನು ಬೇಗ ೩೬

ಬೆಟ್ಟದಾವರೆ ಕೆಂದಾವರೆ ಸಂಪಗೆ ಅಳಿ
ಮುಟ್ಟಲಮ್ಮದ ಅರಳುಗಳ
ಸೃಷ್ಟಿಯೊಳುಳ್ಳ ಫಲಪುಷ್ಪವ ತಂದ
ಖಟ್ವಾಂಗಧರನ ಅರ್ಚನೆಗೆ ೩೭

ಈ ಪರಿಯಲಿ ಪೂಜಿಸಿದನು ಅನುದಿನ
ಆ ಪುರಹರ ಮೂರ್ತಿಯನು
ಧೂಪದಾರತಿದೀಪ ನೈವೇದ್ಯಮೊದಲಾಗಿ
ಪಾಪನಾಶನೆ ಜಯವೆಂದು ೩೮

ಹಾಲು ಮೊಸರು ತುಪ್ಪ ಹಣ್ಣುಕಾಯಿಗಳಿಂದ
ಮೇಲಾದ ದಿವ್ಯಾನ್ನವನು
ಶೂಲಧರಗೆ ನೈವೇದ್ಯವ ಮಾಡಿದ
ಕಾಲಹರನೆ ಜಯವೆಂದು ೩೯

**ಹನ್ನೆರಡೊರುಷ** ಉಂಗುಷ್ಠದಿ ಪೂಜಿಸೆ
ಪನ್ನಗಧರನು ಬೇಗದಲಿ
ಇನ್ನು ಈ ಕ್ರಮವು ನಿನಗೆ ಬೇಡವೆನುತಲಿ
ಚೆನ್ನಮಾದೇಶ್ವರ ನುಡಿದ ೪೦

ಹಸ್ತದೊಳಗೆ ಪೂಜಿಸು ನಮ್ಮನು ಯೆಂದು
ವಿಸ್ತರಿಸಿವನು ತೂಳದಲಿ
ಕರ್ತೃವಾಡಿದ ವಾಕ್ಯಕೆ ಬಿಲ್ಲೈಯ್ಯನು
ಮತ್ತೆ ಇಂತೆಂದು ನುಡಿದನು ೪೧

ನಾನು ಹಿಡಿದವ್ರತವನು ಬಿಡೆನು ಅನು
-ಮಾನವಿಲ್ಲೆನ್ನ ಮನದಲಿ
ಜ್ಞಾನಿ ಬಿಲ್ಲೈಯ್ಯನಿಂತೆಂದು ಬೆಸಸಿದನು
ಮೀನಾಂಕ ವೈರಿಯಕೂಡೆ ೪೨

ಹಾನಿಬಹುದು ನೀನು ಕೇಳದಿರ್ದಡೆ ಯೆಂದು
ತಾನು ಹೇಳಿದನು ಶಂಕರನು
ಯೇನುಬಂದರು ಬರಲೆಂದು ಬಿಲ್ಲೈಯ್ಯನು
ತಾನು ವ್ರತವ ಬಿಡೆನೆಂದ ೪೩

ಕರ್ತೃವ ಪೂಜೆಗೆ ಪತ್ರೆಗೆ ಮರನೇರಿ
ಇತ್ತನೂಕಿದನು ಮಡುವಿಗೆ
ಸತ್ತನು ಎಂದನ್ನಸಾಲೆಯ ಸ್ವಪ್ನದಿ
ಮೃತ್ಯುಂಜಯನು ಹೇಳಿವನು ೪೪

ರಮಣನಳಿದನೆಂದು ಕುಮುದನೇತ್ರದ ನೀರು
ಕಮಲಕುಚದ ಮೇಲೆ ಬೀಳೆ
ಭ್ರಮರಕುಂತಳೆ ಅಡಿಇಟ್ಟು ದುಃಖದೊಳಿರ್ದ
ಭ್ರಮೆಯ ನಿನ್ನೇನಹೇಳುವೆನು ೪೫

ಅಂಜದಿರೆಂದನ್ನಸಾಲೆಯ ಸ್ವಪ್ನದಿ
ಕುಂಜರಚರ್ಮಾಂಬರನು
ಸಂಜೆಸುತಿಪ್ಪ ಸುತನಕೊಡುವೆನು ಯಂದು
ಕೆಂಜೆಡೆಯಭವ ಹೇಳಿದನು ೪೬

ಅಂದಿಗೆ ಮೂರುಮಾಸದ ಗರ್ಭವು ತೋರಿ
ಇಂದುವದನೆಗಿರುತಿಹುದು
ಬಂದವು ನವಮಾಸ ತುಂಬಿತು ಆಗಳೆ
ಮಂದಗಮನೆ ಯಿರುತಿಹಳು ೪೭

ಬಿಲ್ಲೈಯ್ಯನರಾಣಿ ಅನ್ನಸಾಲೆಯ ಗರ್ಭ
ದಲ್ಲಿ ಜನಿಸಿದ **ಕೇಶಣ್ಣ**
ನಿಲ್ಲದೆ ಜನನವಾಗಲು ಸತಿಯರು ತಾವು
ಯೆಲ್ಲರು ಉತ್ಸಾಹದಿಂದ ೪೮

ಪೆತ್ತಳು ಗಂಡುಮಗನ ಅನ್ನಸಾಲೆಯ
ಚಿತ್ತಜವೈರಿಯ ವರದಿ
ಅರ್ತಿಯಿಂದಲಿ ಬಾಲದೊಡಿಗೆಗಳನು ಕೊಟ್ಟು
ಇತ್ತ ಲೀಲೆಯೊಳಾಡುತಿಹನು ೪೯

ಮುತ್ತಿನಗೂಡಿನ ನೆತ್ತಿಯ ಅರಳೆಲ
ಕೆತ್ತಿದಮಾಣಿಕ ಕಡಕು
ಎತ್ತರದಲಿ ಕಾಲುಗೆಜ್ಜುಡಿದಾರವು
ಆರ್ತಿಯಿಂದಲಿ ವೊಪ್ಪುತಿಹನು ೫೦

ಶೂಲದೊಳಿಡೆ ಅಂಕನಳಿಯಲು ಸತಿ
-ಗೋಲೆಭಾಗ್ಯವ ಕೊಟ್ಟವನ
ಕಾಲಹರನ ಪೂಜಿಸಬೇಕು ಎನುತಲಿ
ಲೋಲಾಕ್ಷಿ ಬಂದಳು ಗುಡಿಗೆ ೫೧

ಬಂದಳು ಅನ್ನಸಾಲೆಯು ಅಗ್ಗಣಿಯನು
ಬಿಂದಿಗೆಯಲಿ ತುಂಬಿಕೊಂಡು
ಗಂಧಪುಷ್ಪವು ಧೂಪದೀಪ ನೈವೇದ್ಯವು
ವೊಂದೆಡೆಯೊಳಗಿರಿಸಿದಳು ೫೨

ಇಂದುಧರನ ಪೂಜೆಯಮಾಡಿ ಸದುಭಕ್ತಿ
ಯಿಂದ ಕೇಳಿದಳು ಇಷ್ಟವನು
ನಿಂದು ಕೈಮುಗಿದಾಗ ಬೇಡಿಕೊಂಡಳು ಯೆನ್ನ
ಕಂದನ ರಕ್ಷಿಸು ಯೆಂದು ೫೩

ದೇವರದೇವನೆ ಭಾವಜವೈರಿಯೆ
ಕಾವುದು ಯನ್ನ ಶಿಶುವನು
ಈವನೆ ಬೇಡಿದವರಿಗೆ ಪದವಿಯನು
ಪಾವನಮೂರ್ತಿ ನೀನೆಂದು ೫೪

ಈಶನ ಕೃಪೆಯಿಂದ ಕೇಶಣ್ಣಗೆ ಭವ
-ಪಾಶಹರಿಯಿತು ಬೇಗದಲಿ
ಆ ಶಶಿಮುಖಿತನ್ನ ಶಿಶುವ ಪಾಲಿಸಿಕೊಂಡು
ಬೇಸರಿಲ್ಲದೆ ಪೂಜಿಸಿದಳು ೫೫

ಬಾಲಕತನಹೋಗಿ ಲೀಲೆಯಿಂ ಬಳೆದನು
ಕಾಲಹರನ ಕೃಪೆಯಿಂದ
ಬಾಲೆ ತನ್ನಯ ಸುತನಿಗೆ ಮದುವೆಯು ಯೆಂದು
ಆಲೋಚಿಸಿದಳು ನಿಜಮನದಿ ೫೬

ಈ ಪರಿಯಲಿ ಚಿಂತಿಸಿದಳು ಅನುದಿನ
ಆ ಪುರುಷನಿಗೆ ಕನ್ನಿಕೆಯ
ರೂಪುಳ್ಳ ಸತಿಯನು ಮದುವೆ ಮಾಡಿದಳು
ವ್ಯಾಪಿಸಿ ಮಾತೆ ಸುತನಿಗೆ ೫೭

ಸತಿಪತಿಯರ ಸಂತೋಷವ ನೆರೆನೋಡಿ
ಅತಿಹರುಷದೊಳಿರ್ದಳಾಗ
ಸುತನಿಗೆ ಉಣಲಿಕ್ಕಿ ತುರುವಕಾಯ್ವಡೆ ಬೇಗ
ಮತಿವಂತ ಕೇಶಣ್ಣ ಪೋದ ೫೮

ಹಟ್ಟಿಯ ತುರುವನು ಬಿಟ್ಟು ಹೊಡೆದುಕೊಂಡು
ನೆಟ್ಟನೆ ಕೊಳಲ ನುಡಿಸುತ
ಬೆಟ್ಟದೊಳಗೆ ಮೇಯಿಸಿ ನೀರಕುಡಿಸಿಯೆ
ದಿಟ್ಟನು ಬರುತಿರ್ದನಾಗ ೫೯

ನಿಲ್ಲದೆ ಕೊಳಲನೂದುವ ಸೊಗಸಿಗೆ ತೃಣ
ಮೆಲ್ಲದೆ ತುರುಕುಲವು ತಾ
ಮೆಲ್ಲನೆ ಲಾಲಿಸಿ ಕೇಳುತಿರ್ದವು ಪಶು
-ವಲ್ಲಲ್ಲಿ ಕಾಂತಾರದಲ್ಲಿ ೬೦

ಕೀಲಾರಗಳನು ಕಾಯ್ದನು ಕೇಶಣ್ಣನು
ಲೀಲಾವಿನೋದಗಳಿಂದ
ಶೂಲಧರನ ಪೂಜೆಯಮಾಡಿ ಆಗನ್ನ
-ಸಾಲೆ ಬಂದಳು ಮನೆಗಾಗಿ ೬೧

ಹಲವುದಿನವು ಪೂಜೆಮಾಡಿದ ಭಕ್ತಿಗೆ
ಒಲಿದನು ಮಾದೇಶ್ವರನು
ನಲಿದು ಸಂತೋಷದೊಳಿರೆ ಸುತನಿಗೆ ಬೇಗ
ಗಳಿಲನೆ ಬಂದಿತು ಮರಣ ೬೨

ಒಂದುದಿನವು ಮಿಾಸಲಳಿಯಲು ಕೋಪದಿ
ಕೆಂದಹಸುವು ಹುಲಿಯಾಗಿ
ಬಂದು ಕಡಿಯಲು ಕೇಶಣ್ಣನು ಮಡಿದನು
ಯೆಂದು ಹೇಳಿದ ಸ್ವಪ್ನದಲಿ ೬೩

ಕಂದನಳಿದ ಸ್ವಪ್ನವಕಂಡು ದುಃಖಿದಿ
ಬಂದಳು ಅನ್ನಸಾಲಮ್ಮ
ಇಂದುಧರನೆ ಹೀಗೆ ಮಾಡಬಹುದೆ ಯೆಂದು
ನೊಂದಳು ತನ್ನ ಮನದಲ್ಲಿ ೬೪

ಕೇಶಣ್ಣೊಡೆಯರ ಮಡದಿಗಿಹುದು ನವ
-ಮಾಸದ ಗರ್ಭವು ತೋರಿ
ಆ ಸತಿಯಿರುತಿರೆ ನವಮಾಸ ತುಂಬಲು
ಆ ಶಶಿಮುಖಿ ಹೆತ್ತಳಾಗ ೬೫

ನಾರಿಯ ಉದರದಿ **ಬೀರಯ್ಯ** ಜನಿಸಿದ
ಧಾರುಣಿಗತಿ ಚೆಲ್ವನೆನಿಸಿ
ಧೀರನು ಕುಲದೀಪನು ಒಪ್ಪಿರ್ದನು
ಮಾರಾರಿಯ ಕೃಪೆಯಿಂದ ೬೬

ಬಂದು ಹೇಳಿದರು ಚರರು ಕೇಶಣ್ಣನು
ಸಂದನುಯೆಂಬ ಸುದ್ದಿಯನು
ಬಂದು ವಿಚಾರಿಸಿ ಹೊನ್ನಿದೇವನು ಆಗ
ನೊಂದನು ತನ್ನ ಮನದಲಿ ೬೭

ಇತ್ತನೋಡಿದ ಹೊನ್ನಿದೇವ ಕೀಲಾರವ
ಮತ್ತೆ ವಿಚಾರಿಸಿ ಕೇಳಿ
ಚಿತ್ತದಿ ನೆನೆದು ಕೃತಕವ ಸೇವಕರಿಗೆ
ವಿಸ್ತರಿಸಿದನು ಇಂತೆಂದು ೬೮

ತನ್ನ ಸೇವಕರ ಕರೆಸಿ ಹೊನ್ನಿದೇವನು
ಭಿನ್ನತಂತ್ರವನು ಹೇಳಿದನು
ಮನ್ನಿಸಿ ಅಂಜದಿರೆಂದು ಉಳಿಯ ಕೊಟ್ಟು
ತನ್ನ ಚಂಗಡಿಗಾಗಿ ಹೋದ ೬೯

ಆಗ ಸೇವಕರು ಹೊಡೆದರು ಕೀಲಾರವ
ಶೀಘ್ರದಿ ಛಂಗಡಿಗಾಗಿ
ಸಾಗಿಬರುವ ತುರುವಿಂಡನು ನೋಡಲು
ಬೇಗ ತತ್ತುರುವ ನಿತ್ತವಗೆ ೭೦

ಸೆರೆವೂರೊಳಗಿರುವಳು ದುಂಡಮಾರಿಯು
ಯಿರದೆ ಕೇಳಿದರು ಕಣಿಯನು
ಭರದಿಂದ ಹೇಳಿದ ಮಾದೇಶ್ವರನಿಗೆ
ಹರಸಿ ಕಾಣಿಕೆ ಕಟ್ಟುಬೇಗ ೭೧

ಎಂದು ಹೇಳಿದ ಕಣಿಗಾತಿಯ ನುಡಿಗೇಳಿ
ದಂದು ಮುಡಿಯನುಟ್ಟುಕೊಂಡು
ತಂದೆ ಮಾದೇಶ್ವರ ತಪ್ಪುಂಟೆಯೆಂದಾಗ
ಬಂದು ಕಾಣಿಕೆಯ ಕಟ್ಟಿದರು ೭೨

ಮಕ್ಕಳ ಹೆಸರ ಕರೆದು ಹೊನ್ನಿದೇವನು
ಒಕ್ಕಲಾದನು ಮಾದೇಶ್ವರಗೆ
ಧಿಕ್ಕನೆ ಕರವಮುಗಿದು ಬೇಡಿಕೊಂಡನು
ಮುಕ್ಕಣ್ಣನೆ ರಕ್ಷಿಸೆಂದು ೭೩

ದೇವರ ಕೀಲಾರವೆಂದು ಅರಿಯೆ ನಾನು
ಪಾವನಮೂರ್ತಿ ನೀವೆನ್ನ
ಕಾವುದು ಎಂದು ಭಕ್ತಿಯಲೆರಗಿದ ಹೊನ್ನಿ
ದೇವನು ಬಿನ್ನೈಸಿದನು ೭೪

ಹೊಡೆದು ತಂದರು ಕೀಲಾರವ ನಡುಮಲೆ
ಒಡೆಯನ ಸನ್ನಿಧಿಗಾಗಿ
ಬಿಡದೆ ತಪ್ಪುಂಟೆಂದು ಬೇಡಿಕೊಂಡರು ಆಗ
ಮೃಡ ಮಾದೇಶ್ವರನಡಿಗೆ ೭೫

ಏಳುದಿನದ ಗೋತ್ರ ಸಗಣೆಯು ಬರಬೇಕು
ಹೇಳಿದನಾಗ ಶಂಕರನು
ಆಳೋಚಿಸಿಕೊಂಡು ಹೊತ್ತರು ಘರುವೆಯ
ಭಾಳಲೋಚನನು ಹಾಕಿಸಿದ ೭೬

ತನ್ನ ಸೇವಕರು ಮಕ್ಕಳು ಜನಸಹವಾಗಿ
ಉನ್ನತ ಹರುಷದೊಳಿರ್ದ
ಚೆನ್ನಮಾದೇಶ್ವರ ಗತಿಯೆಂದು ಚಂಗಡಿ
ಹೊನ್ನಿದೇವನು ಬರುತಿರ್ದ ೭೭

ಬಿಲ್ಲೈಯ್ಯನ ವಂಶಾವಳಿ ಪೂಜಕ
ರಲ್ಲಲ್ಲಿ ಉನ್ನತರಾಗಿ
ಎಲ್ಲರು ಮಾದೇಶ್ವರನ ಪೂಜಿಸಿಕೊಂಡು
ಯಲ್ಲತಮ್ಮಡಿ ಇರುತಿರಲು ೭೮

ಹೆತ್ತಯ್ಯ ಮುತ್ತಯ್ಯ ಪುತ್ರರು ಪೌತ್ರರು
ಮತ್ತಲ್ಲಿ ಘನವಾಗಿಹರು
ಸುತ್ತಲು ಬಂಧುಬಳಗ ತಮ್ಮಡಿಗಳು
ಇತ್ತರದಲ್ಲಿ ವೊಪ್ಪಿದರು ೭೯

ಕಾಳಮಾದನು ಕೆಂಪಮಾದನು ಬೆಣಮಾದ
ಬೋಳಮಾದೈಯ್ಯನೆನಿಸುವ
ತೋಳ ಮಾದನು ಓದುವ ಮಾದೈಯ್ಯನು ಅವ
ರೇಳಿಗೆಯೇನ ಹೇಳುವೆನು ೮೦

ತಮ್ಮಡಿಗಳ ಶಿಖಾಮಣಿ ದುಂಡೈಯ್ಯ
ಸನ್ಮಾರ್ಗವಡೆದ ಪುತ್ರರನು
ಇಮ್ಮಡಿ ಸದ್ಗುಣವಂತ ದಾಕ್ಷಿಣ್ಯನು
ಧರ್ಮವನಾಚರಿಸುವನು ೮೧

ದೇವರಳಿಯ ರಾಯಣ್ಣನು ಸುತಸತಿ
ರೀವಿಯಿಂದೊಪ್ಪುತ್ತಲಿರಲು
ಆವರಾಯರಿಗೆ ಕಪ್ಪವಕೊಡದೆ ಮಹಾ
ಕೋವಿದನೆನಿಸಿ ಮೆರೆವನು ೮೨

ಧೀರನುದಾರ ವಜೀರ ರಣಾಗ್ರಕ್ಕೆ ಹ
ಮ್ಮೀರನೆನಿಸಿ ಕೊಂಡಿರುವ
ಮಾರನರೂಪಿನಂತೆಸೆವ ಗಂಭೀರ ವಿ
ಚಾರನೊಪ್ಪಿರ್ದ ನೋಲಗದಿ ೮೩

ಆತನ ಮಗಳು ದೇವಕಿಯ ಲಾವಣ್ಯಕೆ
ಭೂತಳದೊಳಗೆಣೆಯಿಲ್ಲ
ಖ್ಯಾತಿವಡೆದು ಸುರಲೋಕದ ಹೆಣ್ಣಂತೆ
ಮಾತಿನೊಳಗೆ ನೆರೆಜಾಣೆ ೮೪

ನಡೆಯಲ್ಲಿ ಹಂಸೆ ನುಣ್ಣೊಡೆ ಕದಳಿ
.. ............ . ...........
.......... ... ............
........ ...................... ೮೮

ಆಗಬಂದಳು ರಾಯಣ್ಣನ ಮಗಳು ತಾ
ಬೇಗದಿ ತಂದೆಯಬಳಿಗೆ
ಸಾಗಿ ಬರುವಳ ಲಾವಣ್ಯವೀಕ್ಷಿಸಿ ಶಿರ
ದೂಗಿ ನೋಡಿದರಾಚರರು ೮೯

ಕತ್ತ ಹಿಡಿದು ನೂಕುನೂಕೆಂದು ರಾಯನು
ಒತ್ತಿಲಿರ್ದವರಿಗೆ ಪೇಳೆ
ಮತ್ತೆ ತಳ್ಳಿದರೊಡೆಯನ ಕೋಪವ ಕಂಡು
ಇತ್ತ ತೆರಳಿದರಾಚರರು ೯೦

ಬಂದರು ಓಲೆಯ ಚರರು ತಮ್ಮೊಡೆಯಗೆ
ನಿಂದು ಕೈಮುಗಿದು ಬಿನ್ನೈಸೆ
ಇಂದು ನಮ್ಮಯ ಪ್ರಾಣವುಳಿಯಿತು ಯೆನುತಲಿ
ನಿಂದು ಪೇಳಿದರಾಚರರು ೯೧

ಪೊಡವಿಪತಿಗೆ ಕೋಪಬರುವ ಸಮಯದೊಳು
ಅಡಿಗೆರಗಿದರಾ ಚರರು
ನುಡಿದರು ಒಂದುಬಿನ್ನಹ ಉಂಟೆಂದೆನೆ
ಒಡೆಯ ಕೇಳಿದನದೇನೆಂದು ೯೨

ರಾಯಣ್ಣನವರ ಮಗಳ ಲಾವಣ್ಯಕೆ
ಭೂಮಿಯೊಳಗೆ ಸರಿಯಿಲ್ಲ
ದೇವರು ಹೆಣ್ಣ ತರಿಸಬೇಕುಪಾಯದಿ
ಸಾಹಸಪಟ್ಟು ಬೇಗದಲಿ ೯೩

ಹೇಳಿದರಾಮಾತಿಗೆ ಸಂತಸದಿಂದ
ಕೇಳಿದ ನೃಪ ಹರುಷದಲಿ
ಆಳೋಚಿಸಿ ಮಂತ್ರಿಯ ಕಳುಹಿದ ಹೆಣ್ಣು
ಕೇಳೆಂದು ಆತನ ಬಳಿಗೆ ೯೪

ಮಂತ್ರಿ ಬಂದನು ರಾಯಣ್ಣನ ಬಳಿಗೆ
ಇಂತೆಂದನು ವಿನಯದಲಿ
ಕಂತುಸಮಾನ ರೂಪುಳ್ಳ ನಮ್ಮರಸು ಗುಣ
-ವಂತಗೆ ಹೆಣ್ಣು ಕೊಡೆಂದು ೯೫

ಹೆಣ್ಣನು ಕೊಡುಯೆಂಬ ಮಂತ್ರಿಯ ನುಡಿಗೇಳಿ
ಅಣ್ಣ ರಾಯಣ್ಣ ನಿಂತೆಂದ
ಸಣ್ಣವಳವಳು ನಿಮ್ಮರಸಿಗೆ ತರವಲ್ಲ
ಬಿನ್ನಾಣದಿಂದ ನುಡಿದನು ೯೬

ಮಂತ್ರಿಗೆ ನುಡಿದ ತೆರವುಹೇಳೆಂದಾಗ
ಪಂತದ ಮಾತನು ಕೇಳಿ
ಚಿಂತೆಯಿಂದಲಿ ಮೂರುಸಾವಿರ ಹೊನ್ನೆಂದು
ತಂತ್ರದಿ ಪೇಳ್ದ ರಾಯಣ್ಣ ೯೭

ಎಂದಮಾತಿಗೆ ಶುಭದಿನವ ಜೋಯಿಸರ
ಬಂದು ಕೇಳಿದರು ಲಗ್ನವನು
ಇಂದುವಾರವು ಒಳ್ಳಿತೆಂದು ಬ್ರಾಹ್ಮಣಪೇಳೆ
ನಿಂದು ಬಿನ್ನೈಸಿದ ಮಂತ್ರಿ ೯೮

ಮೂರುಸಾವಿರಹೊನ್ನ ತೋರಿ ಮುಡುಪಕಟ್ಟಿ
ನೀರೆಗೆ ತಕ್ಕ ಬಂಗರವ
ಬೇರೆಪೆಟ್ಟಿಗೆಯ ಭಂಗಾರಗಳನು ಗುರಿ
ನಡೆದರು ಮನ್ನೆಯರು ೯೯

ಅಂದಣ ವಾದ್ಯವು ಮಂದಿ ಕುದುರೆ ಆನೆ
ಸಂದಣಿಸಿತು ಅಲ್ಲಲ್ಲಿ
ಕಂಡು ಕೊಂಗರು ಹೆಣ್ಣನು ಕರೆಯಲು ತಾವು
ಬಂದುದನೇನಹೇಳುವೆನು ೧೦೦

ಕಟ್ಟಿತು ಮೂರುಸಾವಿರ ತೆರವಿನ ಹೊನ್ನ
ಪೆಟ್ಟಿಗೆ ಭಂಗಾರವನು
ದೃಷ್ಟಿಯ ಸೀರೆಯು ಕಟ್ಟದ ಜವಳಿಯು
ಕೊಟ್ಟರು ಮನದಣಿವಂತೆ ೧೦೧

ಬಂದವರಿಗೆ ಪಂಚಾಮೃತರಸವನು
ಸಂದಣಿಯಿಂದ ನೀಡಿಪರು
ಚೆಂದವಾಯಿತು ಹೆಣ್ಣು ಬೇಗಕಳುಹಿಯೆಂಬ
ಅಂದವ ಕೇಳಿದರಾಗ ೧೦೨

ಶ್ವಾನನ ಕೂಡಿ ಪೆಟ್ಟಿಗೆಯ ಹಿಟ್ಟನು ಹಾಕಿ
ಮಾನಿನಿಯೆಂದು ಅಂದಣದಿ
ನೀನಿದ ಬಿಟ್ಟುನೋಡಲು ಬೇಡವೆಂದು ಸ
ನ್ಮಾನದಿ ಕಳುಹಿದರಾಗ ೧೦೩

ಸೃಷ್ಟಿಪತಿಗೆ ಆಗ ದೃಷ್ಟಿತಾಕೀತೆಂದು
ಇಟ್ಟರು ಫಣೆಗೆ ಭಸಿತವ
ಪೆಟ್ಟಿಗೆಯನ್ನು ಆನೆಯಮೇಲೆ ತಂದಾಗ
ಬಿಟ್ಟುನೋಡಿದರು ಶುನಕನ ೧೦೪

ಪಗಲ ಚಂದಿರನಂತೆ ಮಿಗೆ ಕಳೆಗುಂದಿತು
ಹಗರಣವಾಯಿತು ಜಗಕೆ
ಬಗೆದವನೊಡಲ ಕರುಳತೆಗೆವೆನು ಯೆಂದು
ದಿಗುಭುಗಿಲೆಂದಿತು ಕೋಪ ೧೦೫

ದಿಕ್ಕುದಿಕ್ಕಿಗೆ ಓಲೆಯ ಕಳುಹಿದ ಬೇಗ
ಲೆಕ್ಕವಿಲ್ಲದ ದೊರೆಗಳಿಗೆ
ಸೊಕ್ಕಾನೆಯು ದಳಮಂದಿ ಕುದುರೆಗಳು
ಧಿಕ್ಕನೆ ಬರಬೇಕು ಯೆಂದು ೧೦೬

ಕೂಟದ ಮನ್ನೆಯರುಗಳು ಬಂದರು ಆಗ
ಮಿಾಟಿನ ಪಟುಭಟನಿಕರ
ಗಾಟದಯರು ವಾವಳ ಕುಳಂದರ ಪಿಳ್ಳೆ
ಕೂಟದ ಕೊಂಗರೊದಗಿದರು ೧೦೭

ಕತ್ತಿಕೊಡಲಿ ಕರಾರಿ ಚರಿಗೆ ಬಿಲ್ಲು
ಮತ್ತೆ ಬಾಣವು ಉರುಲಂಬು
ಸುತ್ತಿಯಿಡುವ ಭಿಂಡಿವಾಳವು ಗದೆ ಪಿಡಿ
ದಿತ್ತರದಲಿ ಒದಗಿದರು ೧೦೮

ತೆರಳಿತು ಮಂದಿ ಕುದುರೆ ಆನೆ ಸಹವಾಗಿ
ಧುರಧೀರ ಮಂತ್ರಿ ಮನ್ನೆಯರು
ಶರಧಿಯು ತಾ ಮೇರೆತಪ್ಪಿತೊಯೆಂಬಂತೆ
ಭರದಿಂದ ಬಿಟ್ಟಪಾಳೆಯವ ೧೦೯

ನೆಟ್ಟಗಲಲಿ ಸೇನೆಬಿಟ್ಟಿತು ಪಾಳೆಯ
ಹುಟ್ಟಿತು ಸುದ್ದಿ ಬೇಗದಲಿ
ತಟ್ಟನೆಬ್ಬಿಸಿದನು ಮಾದೇಶ್ವರನಾಗ
ದಿಟ್ಟರಾಯಣ್ಣನ ಕರೆದು ೧೧೦

ನಾಗಧರನು ಬೇಗ ನೋಡುವ ಸಮಯಕೆ
ಭೋರ್ಗರೆದವು ತದ್ದುತುರಿಯು
ಸಾಗಿಬರುವ ದೇವನಕಂಡು ಕೋಂಗರು
ಹೋಗುಹೋಗೆಂದು ನುಡಿದರು ೧೧೧

ಎತ್ತಿಬರುವ ಕೊಂಗರದಂಡು ಮುರಿಯಲಿ
ಮುತ್ತಿ ಕೊಲ್ಲಲಿ ಬೇಗವರ
ಮೃತ್ಯುಬರಲಿ ಪಾಳೆಯಕೆಂದು ಸ್ಥಾಪಿಸಿ
ಯಿತ್ತಬಂದನು ಮಾದೇಶ್ವರನು ೧೧೨

ತನ್ನಾಳ ಕರೆದು ಮನ್ನಿಸಿ ವೀಳೆಯವಿತ್ತು
ಯಿನ್ನುಂಟೆ ಜೀವದ ಆಸೆ
ಚೆನ್ನಾಗಿ ಕಾದುವೆನೆಂದು ಹೊರಟನಾಗ
ಮುನ್ನೂರು ಆಳು ಸಹಿತಲಿ ೧೧೩

ಅಂಜಬೇಡೆಂದಭಯವ ಕೊಟ್ಟು ಮಾದೇಶ
ರಂಜಿಪ ಪುಲಿದೊವಲುಟ್ಟು
ಕೆಂಜೆಡೆಯುಭವ ಕಾಳಗಕೆ ಬಂದನು ಆಗ
ಕುಂಜರದನುಜ ಮರ್ದನನು ೧೧೪

ಬೆಟ್ಟದ ಕಲ್ಲು ಮರ ದಿಟ್ಟಿಸಿನೋಡಲು
ಕಟ್ಟದ ಆನೆ ಕುದುರೆಯು
ನೆಟ್ಟನೆ ತೋರುವಂತೆಸೆವುತಿರ್ದವು ಆಗ
ದಿಟ್ಟಕೊಂಗರ ದಂಡಿನೊಳಗೆ ೧೧೫

ಚೂಣಿಯವರ ಮೇಲೆ ಕಾಣಿಸಿಕೊಂಡಿತು
ಪ್ರಾಣದ ಆಸೆಯ ಬಿಟ್ಟು
ಕೇಣದಿ ಕಡಿದಾಡುವ ಉರುಬಿಗೆ ಸೇನೆ
ತ್ರಾಣ ಗೆಟ್ಟೋಡಿದರಾಗ ೧೧೬

ಆ ಸಮಯದೊಳು ರಾಯಣ್ಣನು ಪೊತ್ತಿದ
ಸೂಸುವ ಬಲವನು ಕಂಡು
ಮೀಸೆಯನಲುಗಿಸಿ ಹೊಕ್ಕುಯಿರಿದನು ಆ
ಭಾಸಕೊಂಗರ ಧಂಡಿನೊಳಗೆ ೧೧೭

ಹುಲ್ಲೆಯ ಹಿಂಡಿನೊಳಗೆ ಹುಲಿಹೊಕ್ಕಂತೆ
ಅಲ್ಲಿ ಬಿಟ್ಟಿರ್ದ ಕೊಂಗರನು
ಬಲ್ಲೆಯದೊಳಗೆ ತಿವಿದು ಕೆಡಹಿದನಾಗ
ಬಲ್ಲಿದ ರಾಯಣ್ಣ ಬೇಗ ೧೧೮

ದಿಕ್ಕುದಿಕ್ಕಿನ ದಾರಿಯ ಕಟ್ಟಿಕೊಂಡು ತಾ
ಹೊಕ್ಕನು ನಡುಪಾಳೆಯವ
ಸಿಕ್ಕಿದ ಆನೆ ಕುದುರೆ ಮಂದಿ ದೊರೆಗಳ
ಸೊಕ್ಕುಮುರಿದನು ರಾಯಣ್ಣ ೧೧೯

ಕತ್ತಿಕಠಾರಿಯ ಪಿಡಿದಿರ್ದ ಕೊಂಗರ
ಸುತ್ತಿ ಬಳಸಿಕೊಂಡು ಬೇಗ
ಕುತ್ತಿಕೆಡಹಿ. ರಾಯಣ್ಣನಭಟರು ತಾ
ಮತ್ತೆ ಬೊಬ್ಬಿರಿದಾಲಿದರು ೧೨೦

ಹೋದೆಹೆವೆಂದರೆ ಹಾದಿಯ ಕಾಣೆವು
ಮೂದೇವಿ ಬಂದಿತು ಯಮಗೆ
ಕಾದಬೇಕೆಂದರೆ ಕೈಮುನ್ನ ಬಾರದು
ಸಾಧಿಸಿ ಕರೆದು ಮಾರಿಯನು ೧೨೧

ಹುಲಿಯಿರ್ದ ಗವಿಯೊಳು ಹುಲ್ಲೆ ಸಿಲುಕಿದಂತೆ
ಬಲೆಗೆ ಸಿಕ್ಕಿದ ಮೃಗದಂತೆ
ಸಲೆಗರುಡನಕಂಡ ಉರಗನಂತಿರ್ದರು
ತೊಲಗಿ ಹಜ್ಜೆಯನಡಿಯಿಡದೆ ೧೨೨

ಹರಿಗೆ ಕತ್ತಿಗಳಪಿಡಿದು ಕಣ್ಣುಗಾಣದೆ
ತಿರುಗಿತಿರುಗಿ ಬರುತಿಹರು
ಹರಿಯನಾದರೆ ಕರಿಯಂಜುವ ತೆರನಂತೆ
ಯಿರುತಿರ್ದ ಪಾಳೆಯದಲ್ಲಿ ೧೨೩

ಬಿಲ್ಲಾಳುಗಳ ಬಲ್ಲಿದ ರಾವುತರನು
ಭಲ್ಲೆಯದೊಳಗೆ ತಿವಿದರು
ನಿಲ್ಲದೆ ಉರುಬಿ ತೆರಳುವ ಕೊಂಗರದಂಡ
ಅಲ್ಲಲ್ಲಿ ಮುರಿದೊಟ್ಟಿದರು ೧೨೪

ಹುಯಿದು ತಲೆಯವತ್ತರಿಸಿ ಬಹುದಕಂಡು
ಆಯುಧಗಳನು ಬಿಟ್ಟೋಡಿ
ಕಾವುದು ಯಮ್ಮಪ್ರಾಣವನೆಂದು ಕೊಂಗರು
ಬಾಯಿಬಿಟ್ಟರು ರಣದೊಳಗೆ ೧೨೫

ಮತ್ತೆ ಬಿಡದೆ ಹೊಕ್ಕುಯಿರಿದರು ಸುಭಟರು
ತತ್ತರಿದುಳಿದರಿಬಲವ
ಕತ್ತಿ ಕರಾರದೊಳಗೆ ಯೆತ್ತಿಹುಯ್ಯಲು
ಯಿತ್ತಬಿಟ್ಟರು ಪ್ರಾಣವನು ೧೨೬

ಹೇಡಿ ಪಟ್ಟಿತು ಪಾಳೆಯವೆಲ್ಲ ರಾಯಣ್ಣ
ನಾಳಿನ ಮೋಡಿಯ ಕಂಡು
ಓಡುವ ಸುಭಟರ ಹಿಡಿದು ಕೆಡಹಿ ಮೆಟ್ಟಿ
ಮೇಳೆಯ ಬಿಡಿಸಿದರಾಗ ೧೨೭

ದಟ್ಟೈದಾರದ ಕುರುಹಿನ ಝುಲ್ಲಿಯವರನು
ಅಟ್ಟೈಹುಯಿದರು ಬೇಗದಲಿ
ಹೊಟ್ಟೆಯ ತಿವಿಯೆ ಕರುಳು ಕತ್ತರಿಸಿಬೀಳೆ
ದೃಷ್ಟಿ ಪಲ್ಲಟವಾಯಿತಾಗ ೧೨೮

ಮುರಿಯಲಿಕ್ಕಿದನು ಮಾದೇಶ್ವರನಾ ದಂಡ
ಗರುವಿಸಿ ಬಂದ ಕೊಂಗರನು
ಊರ್ವಿಯೊಳಗೆ ಒಬ್ಬರುಳಿಯದ ಹಾಗೆ
ಸರ್ವೇಶ ಕೊಂದನೆಲ್ಲರನು ೧೨೯

ಭಂಡೆಹಳ್ಳಿಯ ಆಚಾರಿಯು ರಣಭೂಮಿ
ಮಂಡಲದೊಳಗೆ ಸಿಕ್ಕಿದನು
ಕಂಡುಬಿಡದೆ ಕೊಲ್ಲಬೇಕೆಂಬ ಸಮಯಕೆ ಮುಂ
ಕೊಂಡು ನುಡಿದನಿಂತೆಂದು ೧೩೦

ಚೆಂದವಾಗಿಯೆ ಬಸವನನೆಯ್ದು ಲಿಂಗದ
ಮುಂದೆ ತಂದಿರಿಸುವೆ ನಾನು
ಮುಂದರಿಯದೆ ಬಂದೆ ಯೆನ್ನ ಕಾಯ್ವುದು ನೀವು
ಯೆಂದು ಬಿನ್ನೈಸಿದನಾಗ ೧೩೧

ಮಾವನಿದ್ದೂರು ತಗರಪಾಡಿಗೆ ಬಂದು
ಆವಬಗೆಯೊಳಾಗವನು
ತೀವಿದಮಂದಿ ಕುದುರೆಯಲ್ಲಿ ಮಡಿದವು
ಜೀವಸಹಿತ ಬಿಟ್ಟರೆನ್ನ ೧೩೨

ಅಲ್ಲಲ್ಲಿ ಮುಂಡವು ಅಲ್ಲಲ್ಲಿ ರಕ್ತವು
ಅಲ್ಲಲ್ಲಿ ಬಿಡದೆ ಹರಿಯಲು
ಅಲ್ಲಲ್ಲಿ ಹೆಣಮಯ ಅಲ್ಲಲ್ಲಿ ಶಿರಮಯ
ಅಲ್ಲಲ್ಲಿ ರಣಮಯವಾಯ್ತು ೧೩೩

ಸೊರೆಕಾಯವಡುವಿಲಿ ತಲೆಯಗುಡ್ಡೆಯ ಹಾಕಿ
ತಿರುಗಿಬಂದರು ಊರಿಗಾಗಿ
ದೊರೆಗಳವೈರಿ ರಾಯಣ್ಣನು ಬಂದನು
ಧುರಧೀರರ ರಣಕೆ ಹಮ್ಮಿರ ೧೩೪

ಕೊಬ್ಬಿದ ಖಂಡವ ತಿಂದು ಭೂತಗಳಾಗ
ನಿಬ್ಬರದಲಿ ಕುಣಿದಾಡಿ
ಹಬ್ಬವಾಯಿತು ನಮಗೆಂದು ಮರುಳುಮನ
ಉಬ್ಬಿ ಹರಸಿ ಹಾಡಿದವು ೧೩೫

ರಣಭೂಮಿಯೊಳಗೆ ಅವುತಣವ ಮಾಡಿಸಿದನು
ತ್ರಿಣಯ ಮಾದೇಶ್ವರನೆಮಗೆ
ದಣಿದು ಚಪ್ಪರಿಸಿ ಥರ್‍ರನೆ ತೇಗಿದವಾಗ
ಉಣಲಿಕ್ಕಿ ಪ್ರೇತು ಮರುಳಿಗೆ ೧೩೬

ಆಗಬಂದವು ಕಾಗೆ ನರಿ ಹದ್ದು ಗೂಗೆಯು
ಬೇಗದಿ ರಣಭೂಮಿಯೊಳಗೆ
ಥಾಗಿನ ಹೆಣಗಳತಿಂದ ಜಂಬುಕವಾಗ
ಕೂಗತೊಡಗಿತು ಆರ್ತಿಯಲಿ ೧೩೭

ಕೊಂಗರಗಂಡ ನೀನಹುದೊ ಮಾದೇಶ್ವರ
ಲಿಂಗವ ಭಟರು ಕೊಂಡಾಡೆ
ತುಂಗಕುಚೆಯರು ಆರತಿಯ ನಿವಾಳಿಸಿ
ಹಿಂಗದೆ ಕರವಮುಗಿದರು ೧೩೮

ಒಸಗೆಯ ಹರೆಕಾಳೆ ಬಿರುದು ರೆಕ್ಕೆಯು
ಹೊಸಬಗೆಯಲಿ ಮೊಳಗಿದುವಾಗ
ಶಶಿರವಿಗಳ ಕಳೆಯಂತೆ ಮಾದೇಶ್ವರ
ಪಶುಪತಿಬಂದನು ಮಲೆಗೆ ೧೩೯

ಬಂದನು ಭಂಡೆಹಳ್ಳಿಯ ಆಚಾರಿಯು
ನಿಂದು ಕೈಮುಗಿದು ಈಶನಿಗೆ
ಯಿಂದೆನ್ನ ಪ್ರಾಣವಕಾಯ್ದು ಮಾದೇಶ್ವರ
ನೆಂದು ಹೇಳಿದ ಸತಿಯೊಡನೆ ೧೪೦

ಬಸವನ ತಿದ್ದಿದ ಕುಶಲವಾಗಿಯೆ ಶಿಲ್ಪಿ
ಪಶುಪತಿ ಆಲಯಕೆಂದು
ವಸುಧೆಯ ಸಲಹಬೇಕೆಂದು ಭಂಡಳ್ಳಿಯ
ಬಸವೇಶ ಬಂದನರ್ತಿಯಲಿ ೧೪೧

ಉರಿಗೆಜ್ಜೆ ಹಿಳಿಲು ಮುಗುಳುಗೊಂಬು ಬೆಡಗಿನ
ಕರಚೆಲ್ವನೆನಿಸಿ ರಾಜಿಸುವ
ಧರೆಯಭಕ್ತರ ಪೊರೆಯಲು ಬಂದಬೇಗದಿ
ಹರನವಾಹನ ಬಸವಣ್ಣ ೧೪೨

ಚಿನ್ನದ ಹಕ್ಕರಿಕೆಯು ಮುಖರಂಬವು
ಚನ್ನಪಾದಕೆ ಗಗ್ಗರವು
ಹೊನ್ನಹೊಕ್ಕುಳ ಗಂಟೆ ಸರಗೆಜ್ಜೆ ಉಲಿಯಲು
ಚೆನ್ನಮಾದೇಶನೋಲಗಕೆ ೧೪೩

ಸತ್ಯವಂತರು ಭಯಭಕ್ತಿಯಿಂದಲಿ ಕೇಳಿ
ಮುಕ್ತಿಯ ಕೊಡುವನವರಿಗೆ
ಕರ್ತೃಮಾದೇಶ್ವರ ಬೇಡಿದ ಪದವಿಯ
ನಿತ್ತು ವೊಲಿದು ರಕ್ಷಿಸುವನು ೧೪೪

ಈ ಕಥೆಯನು ಲಾಲಿಸಿ ಕೇಳಿದಡೆ ಪಾಪ
ನಾಶವಹುದು ನಿಮಿಷದಲಿ
ಪ್ರೀತಿಯಿಂದಲಿ ಲೇಸಕೊಡುವ ಮಾ-
ದೇಶನ ಯರಡನೆ ಸಂಧಿ ೧೪೫

ಬಿಡದೆ ಯಿಾಶಿವಕಥೆಯನು ಕೇಳ್ದವರಿಗೆ
ತಡೆಯದೆ ಮೋಕ್ಷಾರ್ಥವನು
ಪಡೆವರು ಸಂಪತ್ತು ಸಂತಾನ ಭೋಗವ
ಕೊಡುವನು ಮಾದೇಶ್ವರನು ೧೪೬

*

## ಜಾತ್ರೆಯ ಸಂಧಿ



ಶ್ರೀಗುರು ಮಲ್ಲಿಕಾರ್ಜುನಲಿಂಗ ಪಾಲಿಸು
ಶ್ರೀಗಣಾಧಿಪತಿ ಪಿತನೆ
ಶ್ರೀ ಗೌರಿಯ ವಲ್ಲಭನೆ ವರವಕೊಡು
ಶ್ರೀಗುರು ಪಾದಕ್ಕೆರಗುವೆನು ೧

ಹರಿಯಜರುಗಳು ವಾದಿಸಿ ನಿಮ್ಮಡಿಮುಡಿ
ಯಿರದೆ ಅರಸಿ ಕಾಣದಂಥ
ಚರಣದ ಗುರುಕೃಪೆಯಲ್ಲಿ ಕಂಡ ಶರಣರ
ಚರಣಕ್ಕೆ ನಾನೆರಗುವೆನು ೨

ಮಾಘಬಹುಳ ಚತುರ್ದಶಿಯ ದಿವಸದಲ್ಲಿ
ನಾಗಧರನ ಮಲೆಗಾಗಿ
ಸಾಗಿಬರುವ ಪರಿಷೆಯ ಶೃಂಗಾರವ
ಯಾಗಪೇಳುವೆ ಮುದದಿಂದ ೩

ಕಂಬಿ ತಂಬಟ ಸಮ್ಮೇಳ ಕೌಂಸಾಳೆಯು
ಯಿಂಬಾಗಿ ನುಡಿವ ಢಮರಿಮಿ
ಕುಂಭಿನಿ ದೊರೆಗಳು ಪೊಡೆವ ಭೇರಿಯ ದನಿ
ಸಂಭ್ರಮದಿಂದ ನಡೆದರು ೪

ಗರುವ ಗಂಭೀರರು ಸಿರಿವಂತರು ಗುರು
 ಹಿರಿಯರ ಕಂಡು ನಮಿಸುವ
ಪರಮಭಕ್ತರು ಹರಹರಯೆಂದು ಸ್ತುತಿಸುತ
 ಹರುಷದಿ ಬಂದರರ್ತಿಯಲ್ಲಿ ೫

ಕಾಣಿಕೆಯನು ಕಟ್ಟಿಕೊಂಡು ಮಾದೇಶನ
 ಮಾಣದೆ ನೆನೆವ ಜನರಿಗೆ
ಕಾಣಿಸುತಿಹ ನಡುಮಲೆಗೆ ಉನ್ನತವಾಗಿ
 ಜಾಣರು ಬರುವ ದಾರಿಯೊಳು ೬

ಬೆಲ್ಲಬೇಳೆಯು ಹಣ್ಣುಕಾಯಿ ಕಡಲೆಕಬ್ಬು
 ಒಳ್ಳೆಯ ಎಳೆನೀರು ಕಾಯಿ
ಎಲ್ಲ ಅಕ್ಕಿಯು ಬೇಳೆ ಹೇರುಗಳನು ಹೊತ್ತು
 ನಿಲ್ಲದೆ ಬರುವ ಎತ್ತುಗಳು ೭

ಕಾರಿಯು ಬೆಳ್ಳಿಕೆಂದನು ಬಟ್ಟಿಚಿಂಚನು
 ಆಕಾರಉಳ್ಳವು ಮೊದಲಾಗಿ
ದಾರಿಯೊಳಗೆ ಹೇರನುಹೊತ್ತು ಬರುವ ಶೃಂ
 ಗಾರವ ನೇನಹೇಳುವೆನು ೮

ಕೂಡುಗೊಂಬುಗಳು ಸೇರುವೆಗೊಂಬು ಮೊದಲಾದ
 ಕೋಡು ಬೋಳೆಯು ಮಂಡೆಗೊಂಡು
ನೀಡಿದ ಸಾಗರ ಕೊಂಬಿನೆತ್ತುಗಳೆಲ್ಲ
 ರೂಢಿಗೀಶನ ಮಲೆಗಾಗಿ ೯

ಹೇರಿನ ಯೆತ್ತು ಕೆಲವು ಲೆಕ್ಕವಿಲ್ಲದ
ಹೇರುಗಳನು ಹೊತ್ತು ತರಲು
ಆರಾರು ಬಣ್ಣಿಸಲಳವೆ ಬಸವನ ಶೃಂ
-ಗಾರವ ಬಲ್ಲಂತೆ ಪೇಳ್ವೆ ೧೦

ಕೊಂಬಿನಣಸು ಸರಪಣಿಗೆ ಗೆಜ್ಜೆ ಗಂಟುಮುಖ
ರಂಬವು ಕಾಲ ಗಗ್ಗರವು
ನಂಬಿದವರ ಸಲಹುವ ಬಸವನು ಬಹ
ಸಂಭ್ರಮವೇನ ಹೇಳುವೆನು ೧೧

ನಿಲ್ಲದೆ ನಾಲ್ಕುದಿಕ್ಕಿನಲಿ ಸಂದಣಿಸಿಯೇ
ಮೆಲ್ಲನೆ ನಡೆಯುತೊಗ್ಗಿನಲಿ
ಯಲ್ಲದೇವರುಗಳ ವಲ್ಲಭನಿಹ ಮಲೆ
ಗಲ್ಲಿ ಬಂದರು ಹರುಷದಲ್ಲಿ ೧೨

ಶೃಂಗಾರವಾಗಿ ನಡೆವ ಸತಿಯರುಗಳ
ಅಂಗವನಿನ್ನೂ ಹೇಳುವೆನು
ಹಿಂಗದೆ ತಮ್ಮ ಪುರುಷರು ಮಕ್ಕಳು ಸಹ
ಹೆಂಗಳು ನಡೆದರೊಗ್ಗಿನಲಿ ೧೩

ಪಟ್ಟೆಬರಹ ಸಣ್ಣಸೀರೆ ಬಿಳಿದನುಟ್ಟು
ತೊಟ್ಟರು ಮಿಸುನಿದೊಡಿಗೆಯ
ಕಟ್ಟಿದ ತೋರದುರುಬು ಕಣ್ಣಿಗಂಜನ
ಯಿಟ್ಟು ತಿಲಕ ಫಣೆಯೊಳಗೆ ೧೪

ಹಳದಿಹಸುರು ತಿಳಿಗಾವಿ ಬಿಳಿದನುಟ್ಟು
ಬೆಳತಿಗೆಗಣ್ಣ ನೀರೆಯರು
ಕಳಿನಗೆ ಮುದಸೋಗೆ ಮುಡಿಪೆರೆ ನೊಸಲಿನ
ಕಳಹಂಸಗಮನೆ ನಡೆದರು ೧೫

ಬಟ್ಟಮುಖಿಯ ಭಾವಕಿಯರ ಕುಚಗಳ್ಗೆ
ದೃಷ್ಟಿತಾಗಿತೆಂದು ಬೇಗ
ತೊಟ್ಟರವಿಕೆ ಉಟ್ಟದೇವಾಂಗವು ಅಡಿ
-ಯಿಟ್ಟರು ಮದಗಜದಂತೆ ೧೬

ಯರಳೆಗಣ್ಣಿನ ತೆಳಗಲ್ಲ ಅಳಿಗುರುಳಿನ
ಕೊರಳ ಮುತ್ತಿನ ಸರದಿಂದ
ತರಳೆಯ ಕುಚಭಾರಕೆ ನಡುಬಳುಕುತ
ತೆರಳಿತು ಎಳೆವಣ್ಗಳಾಗ ೧೭

ಕಾರಮಿಂಚುಗಳಂತೆ ಕಣ್ಣಬೆಳಗುವ ಮದ
ವಾರಣದಂತಡಿಯಿಡುವ
ಸೀರೆ ನೇರ್ಮುಡಿಯು ಮೇಲ್ಮುಸುಕಿಟ್ಟುಕೊಂಡು ತಾ
ನಾರಿಯರೆಯ್ದಿದರೊಗ್ಗಿನಲಿ ೧೮

ತಳಿರಡಿ ನುಣ್ದೊಡೆ ಸೆಳೆನಡು ನಳಿತೋಳು
ಕಳಸಕುಚದ ಬಾಲೆಯರು
ಬಳಲುಮುಡಿಯು ಬಟ್ಟಮುಖ ತೆಳುಗಲ್ಲದ
ನಳಿನಾಕ್ಷಿಯರು ನಡೆದರು ೧೯

ಹೇರಿನ ಯೆತ್ತು ಕೆಲವು ಲೆಕ್ಕವಿಲ್ಲದ
ಹೇರುಗಳನು ಹೊತ್ತು ತರಲು
ಆರಾರು ಬಣ್ಣಿಸಲಳವೆ ಬಸವನ ಶೃಂ
-ಗಾರವ ಬಲ್ಲಂತೆ ಪೇಳ್ವೆ ೧೦

ಕೊಂಬಿನಣಸು ಸರಪಣಿಗೆ ಗೆಜ್ಜೆ ಗಂಟುಮುಖ
ರಂಬವು ಕಾಲ ಗಗ್ಗರವು
ನಂಬಿದವರ ಸಲಹುವ ಬಸವನು ಬಹ
ಸಂಭ್ರಮವೇನ ಹೇಳುವೆನು ೧೧

ನಿಲ್ಲದೆ ನಾಲ್ಕುದಿಕ್ಕಿನಲಿ ಸಂದಣಿಸಿಯೇ
ಮೆಲ್ಲನೆ ನಡೆಯುತೊಗ್ಗಿನಲಿ
ಯಲ್ಲದೇವರುಗಳ ವಲ್ಲಭನಿಹ ಮಲೆ
ಗಲ್ಲಿ ಬಂದರು ಹರುಷದಲ್ಲಿ ೧೨

ಶೃಂಗಾರವಾಗಿ ನಡೆವ ಸತಿಯರುಗಳ
ಅಂಗವನಿನ್ನೂ ಹೇಳುವೆನು
ಹಿಂಗದೆ ತಮ್ಮ ಪುರುಷರು ಮಕ್ಕಳು ಸಹ
ಹೆಂಗಳು ನಡೆದರೊಗ್ಗಿನಲಿ ೧೩

ಪಟ್ಟೆಬರಹ ಸಣ್ಣಸೀರೆ ಬಿಳಿದನುಟ್ಟು
ತೊಟ್ಟರು ಮಿಸುನಿದೊಡಿಗೆಯ
ಕಟ್ಟಿದ ತೋರದುರುಬು ಕಣ್ಣಿಗಂಜನ
ಯಿಟ್ಟು ತಿಲಕ ಫಣೆಯೊಳಗೆ ೧೪

ಹಳದಿಹಸುರು ತಿಳಿಗಾವಿ ಬಿಳಿದನುಟ್ಟು
ಬೆಳತಿಗೆಗಣ್ಣ ನೀರೆಯರು
ಕಳಿನಗೆ ಮುದಸೋಗೆ ಮುಡಿಪೆರೆ ನೊಸಲಿನ
ಕಳಹಂಸಗಮನೆ ನಡೆದರು ೧೫

ಬಟ್ಟಮುಖಿಯ ಭಾವಕಿಯರ ಕುಚಗಳ್ಗೆ
ದೃಷ್ಟಿತಾಗಿತೆಂದು ಬೇಗ
ತೊಟ್ಟರವಿಕೆ ಉಟ್ಟದೇವಾಂಗವು ಅಡಿ
-ಯಿಟ್ಟರು ಮದಗಜದಂತೆ ೧೬

ಯರಳೆಗಣ್ಣಿನ ತೆಳಗಲ್ಲ ಅಳಿಗುರುಳಿನ
ಕೊರಳ ಮುತ್ತಿನ ಸರದಿಂದ
ತರಳೆಯ ಕುಚಭಾರಕೆ ನಡುಬಳುಕುತ
ತೆರಳಿತು ಎಳೆವಣ್ಗಳಾಗ ೧೭

ಕಾರಮಿಂಚುಗಳಂತೆ ಕಣ್ಣಬೆಳಗುವ ಮದ
ವಾರಣದಂತಡಿಯಿಡುವ
ಸೀರೆ ಪೇರ್ಮುಡಿಯು ಮೇಲ್ಮುಸುಕಿಟ್ಟುಕೊಂಡು ತಾ
ನಾರಿಯರೆಯ್ದಿದರೊಗ್ಗಿನಲಿ ೧೮

ತಳಿರಡಿ ನುಣ್ದೊಡೆ ಸೆಳೆನಡು ನಳಿತೋಳು
ಕಳಸಕುಚದ ಬಾಲೆಯರು
ಬಳಲುಮುಡಿಯು ಬಟ್ಟಮುಖ ತೆಳುಗಲ್ಲದ
ನಳಿನಾಕ್ಷಿಯರು ನಡೆದರು ೧೯

...... ....... . .. ... ... ....... .
........ .... ... . .....
............. .. ... .. .........
...............—.. .. .

ತನ್ನಪುರುಷರನಲ್ಲದೆ ಅನ್ಯಪುರುಷರ
ತನ್ನ ಸೋದರನೆಂದು ಬಗೆವ
ಮನ್ನಣೆಯಲಿ ಪತಿಭಕ್ತಿಯೊಳಿರುವ ಸಂ
ಪನ್ನೆಯ ರೆಯ್ದಿತೊಗ್ಗಿನಲಿ ೨೭

ಹಾರವ ತೆಗೆದು ಕುಚಕೆ ಸಿಂಗರಮಾಡಿ
ಹಾರುವರನ್ಯ ಪುರುಷರ
ನಾರಿತನ್ನಯ ಗಂಡನ ಮನಸಿಗೆಬಹ
ಜಾರೆವೆಣ್ಣುಗಳು ನಡೆದರು ೨೮

ಬಾಲೆ ಯವ್ವನೆಯರು ಲೋಲಾಕ್ಷಿಯರು ತ್ರಿ
-ಶೂಲಧರನ ಮಲೆಗಾಗಿ
ಲೀಲೆಯಿಂದಲಿ ಮಕ್ಕಳನೆತ್ತಿಕೊಳ್ಳುತ
ಕಾಲಹರನ ಭಜಿಸುತಲಿ ೨೯

ಸುತರಬೇಡುವ ಸತಿಯರು ಒಂದುಲಕ್ಷವು
ಗತಿಯ ಬಯಸುವರು ಕೆಲರು
ಪತಿವ್ರತೆಯರು ಮುತ್ತೈದೆತನವ ಬೇಡಿ
ಅತಿಶಯದಿಂದ ನಡೆದರು ೩೦

ಅಲ್ಲಲ್ಲಿ ಅನ್ನದಾನವು ಅರವಟ್ಟಿಗೆ
ಬೆಲ್ಲದ ಪಾಕಗಳಿಂದ
ನಿಲ್ಲದೆ ದಾರಿಯೊಳಗೆ ಉಪಚರಿಸುವ
ಮೆಲ್ಲನೆ ನಡೆದರರ್ತಿಯಲಿ ೩೧

ಇಂತು ಬರುವ ಪರಿಷೆಯ ಶೃಂಗಾರವ
ಯೆಂತು ಪೇಳುವರಳವಲ್ಲ
ಕಂತುಹರನ ರೂಪಿನಿಂದ ಚರಿಸುವರು
ಮುಂತುಸುರುವೆ ಮುದದಿಂದ ೩೨

ಕ್ಷತ್ರಿಯ ಬ್ರಾಹ್ಮಣ ವೈಶ್ಯ ಶೂದ್ರರುಗಳು
ಮತ್ತಾತ್ರೆಯದಲ್ಲಿ ಜನಿಸಿ
ವಿಸ್ತರಿಸಿಯ ಪೂರ್ವವಳಿದು ಶ್ರೀಗುರುಲಿಂಗ
ವಿತ್ತ ಮಹಾತ್ಮರ ಪೊಗಳೆ ೩೩

ಇರದೆ ಜನರ ಭಕ್ತರಮಾಡಿ ಮುಕ್ತಿಯ
ಕರುಣಿಸಿ ಕೃಪೆಯಿಂದ ಕೊಡುವ
ಸ್ಮರನ ವೈರಿಯ ರೂಪತಾಳ್ದು ಮರ್ತ್ಯದೊಳ
ಗಿರುವ ಮಹಿಮೆಯ ಪೊಗಳುವೆ ೩೪

ಅಷ್ಟಮದಂಗಳ ಮೆಟ್ಟಿ ಕರಣೇಂದ್ರಿಯ
ಸುಟ್ಟುರುಹಿದ ಯೋಗಿಗಳ
ಸೃಷ್ಟಿಗಿಳಿದು ಬಂದು ದೃಷ್ಟವತೋರಿದ
ದೃಷ್ಟಿಮೂರುಳ್ಳನ ಕಂಡ ೩೫

ಸಪ್ಪೆಯಲಿಂಗ ಉಪ್ಪಿನಹಳ್ಳಿಯ ಸ್ವಾಮಿ
ಕಪ್ಪುಗೊರಳ ತೋಂಟದೈಯ್ಯ
ಮುಪ್ಪುರವೈರಿ ಕೊಟ್ಟೂರಬಸವ ಲಿಂ
ಗಪ್ಪನು ಬೋಳಬಸವೇಶ ೩೬

ಕಟ್ಟಿಗೈಯ್ಯನು ಭಿಕ್ಷದ ಮಹಂತೈಯ್ಯನು
ದಿಟ್ಟನು ಪಶುಪತಿಸ್ವಾಮಿ
ನೆಟ್ಟನೆ ನಿರ್ವಾಣ ಬಸವಲಿಂಗೇಶನು
ಸೃಷ್ಟಿಯೊಳಗೆ ಪೊಗಳುವೆನು ೩೭

ವಸುಧೆಯೊಳ್ ಚರಿಸುವ ಎಸೆವ ಮಹಾತ್ಮರು
ಪೆಸರುಪಡೆದ ಮುಲೆಗಾಗಿ
ಬಿಸಿಗಣ್ಣ ಮಾದೇಶ್ವರನ ನೋಡುವೆನೆಂದು
ದಶಮುಖದೈಯ್ಯಾ ಚಿತ್ತೈಸೆ ೩೮

ಶಂಕು ಬುರುಗು ಚಿನ್ನಗಾಳಿನ ಪಿರಿಯು
ಓಂಕಾರದಗಂಟೆ ಜೇಗಟೆಯು
ಬಿಂಕದಿ ಚರಿಸುವ ಚರಲಿಂಗಮೂರ್ತಿಯು
ಭೋಂಕನೆ ಚಿತ್ತೈಸಿದರು ೩೯

ಕಂತೆ ಖಟ್ವಾಂಗ ಕಮಂಡಲ ಕರದಲ್ಲಿ
ಪಿಂತೆಪಿಡಿದ ದಂಡುಕೋಲು ನಿ
ಶ್ಚಿಂತರು ಕಪ್ಪರಜೋಳಿಗೆ ಸಹ ಕಾ
ಲಾಂತಕರುಗಳು ಚಿತ್ತೈಸೆ ೪೦

ಭಸಿತ ರುದ್ರಾಕ್ಷಿ ಕೆಂಜೆಡೆ ಸುಲಿಪಲ್ಲಿನ
ಮಿಸುನಿಯ ಕರ್ಣಪತ್ರಗಳು
ಎಸೆವ ಅತೀತಪೂಜೆಯ ಗಣಾಧೀಶರು
ಪಶುಪತಿಯಿಹ ಮಲೆಗಾಗಿ ೪೧

ಕಾಸೆಕೈಯೊಳಗೆ ಮರದಕತ್ತಿ ಪಂಕುಡಿ
ಪಾಶವ ಬರಿವ ವಿರಕ್ತರು
ಆಸೆಯ ಕಳೆದ ಉದಾಸಿ ಮೂರ್ತಿಗಳು ಭವ
-ನಾಶವಪ್ಪವರು ಚಿತ್ತೈಸೆ ೪೨

ಜಂಗಮಲಿಂಗವು ಮಂಗಳ ಹೃದಯರು
ಅಂಗಜವೈರಿಯ ರೂಪ
ಹಿಂಗದೆತಾಳ್ದು ಮರ್ತ್ಯದೊಳು ಚರಿಸುವ ಬೆ
-ಡಂಗಿನ ಮಹಿಮರೈದಿದರು ೪೩

ನಂಜನಗೂಡೆರಗಂಬಳ್ಳಿ ಸುತ್ತೂರು
ಹೊಂಡರಬಾಳು ಕುಂತೂರು
ರಂಜಿಸುತಿಹ ಪಂಚಮಠದ ಮಹಾತ್ಮರು ನಿ
ರಂಜನ ಯತಿಗಳೈದಿದರು ೪೪

ಪೃಥ್ವಿಯೊಳಗೆ ಚರಿಸುವ ಮಹತ್ತಿಗೆ
ಭಕ್ತನಾಗಿರುವ ವಿರಕ್ತ
ಮುಕ್ತಿಯಪಡೆದು ಒಪ್ಪುವ ಸಂಪಯ್ಯನು
ಚಿತ್ತೈಸಿದ ನಡುಮಲೆಗೆ ೪೫

ಗವಿ ಗಂಹರದೊಳಗಿರುವ ತಪಸಿಗಳು
ಭವಹರನಡಿಯ ಧ್ಯಾನಿಸುತ
ತವೆಭಜಿಸುತ ಮುನಿಪತಿಗಳು ಬಂದರು
ಭುವನಕಧಿಕ ಮಲೆಗಾಗಿ ೪೬

ವೀರಶೈವರು ವ್ರತಶೀಲರು ಪರಮಾ
-ಚಾರ್‍ಯರು ಹರನ ಪೂಜಕರು
ಓರಂತೆ ಶಿವಶರಣರು ಬಂದರು ನೆರೆ
ಮಾರಾರಿಯ ಮಲೆಗಾಗಿ ೪೭

ಬಂದರು ಸುರಗಂಧರ್ವರು ಮಲೆಗಾಗಿ
ಸಂದಣಿಸಿತು ಗಣವೃಂದ
ಕುಂದದೆ ಅಲ್ಲಲ್ಲಿ ಲಿಂಗದ ಮಹಿಮೆಯ ಮು
-ಕುಂದ ಅಜ ಗೇಳಲರಿದು ೪೮

ಆದೇಶದಿ ನೆಲಸಿರುವ ಲಿಂಗವು ಕೂಡಿ
ಮಾದೇಶನಿಹ ಮಲೆಗಾಗಿ
ಭೇದವಿಲ್ಲದೆ ಚಿತ್ತೈಸಿದರೆಂಬುದ
ಆದರದಿಂದ ಪೇಳುವೆನು ೪೯

ಸಂದಣಿಯನು ತೊಲಗಿಸಿ ಹಾಹಾ ಯೆಂದು
ಇಂದುಧರನ ಓಲಗದಿ
ನಂದಿ ಮಹಂಕಾಳರು ಎಡಬಲದಲ್ಲಿ
ನಿಂದು ಬಿನ್ನೈಸಿದರಾಗ ೫೦

ಪೊಡವಿಗಧಿಕವೆನಿಸುವ ಸ್ಥಲವಿದು ಯೆಂದು
ಮಡಿವಾಳದೊಳಗೆ ತಾ ನೆಲಸಿ
ಬಿಡದೆ ವೊಲಿದು ಸೋಲಗಿತ್ತಿಗೆ ಮೂಜಗ
-ದೊಡೆಯ ಬಂದವನೆ ಚಿತ್ತೈಸಿ ೫೧

ನಂಟುಮಾಡಿಯೆ ಪರವೆಯ ನಂಬ್ಯಣ್ಣಗೆ
ಕುಂಟಣಿಯಾಗಿ ನಡೆಸಿದ
ದಂಟಹಳ್ಳಿಯ ಶಿವನಂಕಾರೇಶ ವಿಷ
ಕಂಠಧರನೆ ಚಿತ್ತೈಸಿ ೫೨

ಹಂಬಲಿಸುವ ಭಕ್ತರಿಗೆ ನಂಬಿಗೆಯಿತ್ತು
ಕಂಬಾಳದೊಳಗೆ ತಾನೆಲಸಿ
ಅಂಬು ಐದುಳ್ಳನ ವೈರಿ ಸಿದ್ಧೇಶ್ವರ ತ್ರಿ
-ಯಂಬಕದೇವ ಚಿತ್ತೈಸಿ ೫೩

ಬಂಟನಾಗಿಯೆ ಬಾಣನ ಬಾಗಿಲಕಾಯ್ದು
ಗಂಟಕದ್ದನು ಘನಪತಿಯ
ಕುಂಟನಾಗಿಯೆ ಮರೆಹೊಕ್ಕ ಶ್ಯಾಗದ ನೀಲ
ಕಂಠೇಶ್ವರನೆ ಚಿತ್ತೈಸಿ ೫೪

ಪೂಸರವಿಯ ನೆಲಸಿದ ವೈರಿಕಪ್ಪುರ
ಈಶನು ಸರ್ವೇಶ್ವರನು
ಶೇಷಭೂಷಣ ಶಿವನಂಕಾರೇಶನು ಬಂದ
ಯಿಾಶಮಾದೇಶ ಚಿತ್ತೈಸಿ ೫೫

ಕಂಡೆಹೆವೆಂದಡಿ ಮುಡಿಯವಾದಿಸಿ ಮುಂ
-ಕೊಂಡು ನುಡಿಯೆ ಹರಿಬ್ರಹ್ಮ
ಭಂಡೆಹಳ್ಳಿಯಲಿ ನೆಲಸಿದೆಳಮೇಶ ಭೂ
ಮಂಡಲದೊಡೆಯ ಚಿತ್ತೈಸಿ ೫೬

ಹಲವು ಪದಾರ್ಥವ ಒಲಿದು ಪಾಕವಮಾಡಿ
ತೊಲಗಿಸಿ ಹಿಂಗಡಿಸಿದನು
ಅಲಗುಮೂಲೆಯ ಮಲ್ಲಿಕಾರ್ಜುನದೇವರು
ಸುಲಭದೇವನೆ ಚಿತ್ತೈಸಿ ೫೭

ಬಣ್ಣಿಸಿಪಾಡಿ ಶಿವನ ಮರೆಯ ಹೊಕ್ಕ
ಹೆಣ್ಣಿಗೆ ಗಂಡುರೂಪಿತ್ತ
ಕಣ್ಣನೂರೊಳುನಿಂದ ಶಿವನಂಕಾರೇಶ ಮು
ಕ್ಕಣ್ಣಹರನೆ ಚಿತ್ತೈಸಿ ೫೮

ಕುಂಭಿನಿಪತಿ ಬಲ್ಲಾಳ ಸತಿಯಕೊಡೆ
ರಂಭಗೆ ಶಿಶುವಾಗಿರ್ದು ತ್ರಿ
ಯಂಬಕದೇವನು ತುಮ್ಮನಾಚಿಯ ಲಿಂಗ
ಶಂಭುಬಂದವರೆ ಚಿತ್ತೈಸಿ ೫೯

ಹೇಮಾದ್ರಿಯಿಂದಲಿ ಪ್ರೇಮದಿ ಕಂಪಣ
ಸೀಮೆಯ ಭಕ್ತರಿಗೊಲಿದು
ಈ ಮಹಿಯೊಳು ಗಾಜನೂರೊಳು ನೆಲಸಿದ
ಸೋಮೇಶ್ವರನೆ ಚಿತ್ತೈಸಿ ೬೦

ಮನ್ನಣೆಯಿಂದಲಿ ಮುನ್ನ ಕಲ್ಯಾಣದಿ
ಚೆನ್ನಾಗಿ ನೀಡಿ ಜಂಗಮಕೆ
ಯಿನ್ನು ಭಕ್ತರ ಸಲಹುವೆನೆಂದು ನೆಲಸಿದ
ಮಿಣ್ಣದ ಬಸವ ಚಿತ್ತೈಸಿ ೬೧

ಆಗಮಶಾಸ್ತ್ರ ಕಗೋಚರ ಕಾಶಿಯ
ಬೇಗದಿ ಕ್ಷೇತ್ರದಿ ಬಂದು
ಹೂಗೆದಿ ನೆಲಸಿದ ಶಿವನಂಕಾರೇಶ್ವರ
ನಾಗಭೂಷಣನೆ ಚಿತ್ತೈಸಿ ೬೨

ಬಲಿದ ಮೂಜಗದೊಡೆಯ ನೆನಿಸಿಕೊಂಡೆ
ಬಿಲ್ಲಿನೊಳಗೆ ಪಾರ್ಥಬಡಿಯೆ
ನಲ್ಲೂರೊಳಿಹ ಶಿವನಂಕಾರೇಶ್ವರ ಕಬ್ಬು
-ವಿಲ್ಲನ ವೈರಿ ಚಿತ್ತೈಸಿ ೬೩

ಹಮ್ಮನಾಡಿದ ಬ್ರಹ್ಮನಿಗೆ ಶಿಕ್ಷೆಯಮಾಡಿ
ಗಮ್ಮನೆ ನಿಮ್ಮ ಪೂಜಿಸಲು
ನಿರ್ಮಳ ಪದವಿಯನಿತ್ತ ಮಾರಟಹಳ್ಳಿ
ಬ್ರಹ್ಮಲಿಂಗವೆ ಚಿತ್ತೈಸಿ ೬೪

ಅಂದು ದಕ್ಷನಿಗೆ ಶಿಕ್ಷೆಯ ಮಾಡೆಂದು
ಕಂದವೀರೇಶಗೆ ಪೇಳೆ
ಬಂದೀಗ ಬರಗೂರಬೆಟ್ಟದೊಳಗೆ ನಿಂದ
ನಂದೇಶ್ವರನೆ ಚಿತ್ತೈಸಿ ೬೫

ಕಾಲನ ಶೂಲದೊಳಿಟ್ಟು ಬೇಗದಿ ಮತ್ತೆ
ಲೀಲೆಯಿಂದಲಿ ತಾನು ವೊಲಿದು
ಪಾಲಮಲೆಯ ಸಿದ್ಧೇಶ್ವರದೇವರೆ
ಶೂಲಧರನೆ ಚಿತ್ತೈಸಿ ೬೬

ಪೊನ್ನಾಚಿ ಬೆಟ್ಟದೊಳಗೆ ತಾಭಕ್ತರ
ಮನ್ನಿಸಿ ಕರದೊರವಿತ್ತು
ಚೆನ್ನಾಗಿ ಸಲಹುವ ಪನ್ನಗಾಭರಣನೆ
ಪೊನ್ನಾಮಲೇಶ ಚಿತ್ತೈಸಿ ೬೭

ಒಂದುಕುಸುಮ ಕಂದಿತೆಂದು ಕಂಗಳಕಿತ್ತು
ಅಂದು ನಿಮ್ಮಡಿಯೊಳಗಿರಿಸಿ
ಬಂದುಹರಿಯು ಬೇಗನಿಂದು ಕೈಮುಗಿದನು
ಇಂದುಧರನೆ ಚಿತ್ತೈಸಿ ೬೮

ಅಜನು ಹಂಸೆಯ ವಾಹನವೇರಿಕೊಂಡಾಗ
ತ್ರಿಜಗವ ಸೃಜಿಸಬೇಕೆಂದು
ನಿಜವಾಗಿ ಅಪ್ಪಣೆಯನು ಕೇಳಬಂದನು
ಭುಜಗಾಭರಣನೆ ಚಿತ್ತೈಸಿ ೬೯

ಸುರಪತಿ ಗಜದ ವಾಹನ ವೇರಿಕೊಂಡೀಗ
ಇರದೆ ಬಂದನು ನಡುಮಲೆಗೆ
ಪುರಹರ ಮಾದೇಶ್ವರನೆ ಹಲಹುಯೆಂದು
ಎರಗಿನಿಂದವನೆ ಭಕ್ತಿಯಲಿ ೭೦

ನುಗ್ಗು ದೈವದ ಗಂಡ ಮಾದೇಶ್ವರಗೆ ಮನ
ಹಿಗ್ಗಿಯೆರಗಿ ಭೀತಿಯಲಿ
ಅಗ್ನಿ ತಗರವಾಹನ ವೇರಿಕೊಂಡು ತಾ
ಶೀಘ್ರದಿ ಬಂದನು ಮಲೆಗೆ ೭೧

ಯಮನು ಕೋಣವನೇರಿ ಗಮನಿಸಿ ಅಲ್ಲಿಂದ
ಕ್ರಮದಿಂದ ಪಯಣಗತಿಯಲಿ
ದ್ಯುಮಣಿಯಸುತ ತನ್ನ ಮಣಿಹದೂಳಿಗವನು
ಕ್ರಮದಿ ಬಿನ್ನೈಸಿದನಾಗ ೭೨

ನೈರುತಿ ನರನವಾಹನವ ನೇರಿಕೊಂಡು
ಬರುತ ಪ್ರೀತಿಯಲಿ ನೋಡಿದನು
ಪುರಹರ ಮಾದೇಶ್ವರನಿಹ ಮಲೆಗಾಗಿ
ಹರುಷದಿ ಬಂದನರ್ತಿಯಲಿ ೭೩

ವರುಣದಿಕ್ಕಿನ ಗಡಿಯನು ಕಾದಿರುತಿಹ
ಬಿಡದೆನೆಗಳ ನೇರಿಕೊಂಡು
ಸಡಗರದಿಂದ ವರುಣ ನಾಗಿಬಂದನು
ಒಡೆಯ ಮಾದೇಶನ ಬಳಿಗೆ ೭೪

ವಾಯುವ್ಯ ದಿಕ್ಕಿನೊಳಗೆಯಿರು ನೀನೆಂದು
ದೇವರು ಕಟ್ಟುಮಾಡಿದನು
ವಾಯುವ್ಯ ತನ್ನ ವಾಹನವೇರಿಬಂದನು
ಭಾವಜವೈರಿಯ ಬಳಿಗೆ ೭೫

ಉತ್ತರದಿಕ್ಕಿನೊಳಗೆ ಒಪ್ಪಿರ್ದನು
ಕೀರ್ತಿವಡೆದು ಹರುಷದಲಿ
ಮತ್ತೆ ತುರಗವೇರಿಕೊಂಡು ಕುಬೇರನು
ಕರ್ತೃ ಮಾದೇಶನ ಬಳಿಗೆ ೭೬

ನಂದಿವಾಹನ ವೇರಿಕೊಂಡು ಈಶಾನ್ಯನು
ಬಂದನು ತನ್ನ ದಿಕ್ಕಿನಿಂದ
ನಿಂದುನೋಡಿದ ನಡುಮಲೆಯೊಳು ನೆಲಸಿದ
ಇಂದುಧರನ ಬಳಿಗಾಗಿ ೭೭

ಆವಾವ ಮಟ್ಟದ ಹಿರಿಯರು ಮಹತ್ತು ಮ
-ತ್ತಾವ ಗವಿಯ ಯತಿಗಳು
ಆವಾವ ಸ್ಥಳದ ಲಿಂಗವು ಬಂದವುಯಂದು
ದೇವನು ಕೇಳ್ದ ಮಾದೇಶ ೭೮

ಬಂದರು ಹರಿಯಜ ಸುರಮುನಿ ನಿಕರವು
ನಿಂದರು ದಿಕ್ಕುಪಾಲಕರು
ಇಂದು ಮಾದೇಶ್ವರ ನೆಲಸಿದ ಮಲೆಯೊಳು
ಸಂದಣಿಸಿತ್ತು ಅಲ್ಲಲ್ಲಿ ೭೯

ಮೂಲೋಕದೊಡೆಯನು ನೆಲಸಿದ ಗಿರಿಯೊಳು
ಕಾಲನ ಗೆಲಿದ ಮಹಿಮರು
ಶೂಲಧರನು ಮಾದೇಶ್ವರನೋಲಗ
ಶಾಲೆಯೊಳಿರ್ದರರ್ತಿಯಲಿ ೮೦

ರಂಭೆ ಊರ್ವಶಿಯು ತಿಲೋತ್ತಮೆ ಮೇನಕಿ
ಯೆಂಬ ಸತಿಯರು ಸಂಭ್ರಮದಿ
ತುಂಬುರ ನಾರದ ಗರುಡ ಗಂಧರ್ವರು
ಇಂಬಾಗಿ ಪಾಡಲೊಗ್ಗಿನಲಿ ೮೧

ಕಿನ್ನರ ಕಿಂಪುರುಷರು ಸುರಲೋಕದ
ಕನ್ನೆಯರುಗಳೊಂದು ದೆಸೆಯ
ಪನ್ನಗಧರನ ಓಲಗದೊಳಗಿರ್ದರು
ಮುನ್ನೂರು ಮೂವತ್ತುಕೋಟಿ ೮೨

ಮದ್ದಳೆ ತಾಳಗತಿಗೆ ನಲಿವುದು ಬೇಗ
ಮುದ್ದುಮುಖದ ನಾರಿಯರು
ದಿದ್ಧಿಮಿ ಧಿಮಿಕೆಂಬ ಮದ್ದಳೆಗತಿಗೆ ಮ-
ತ್ತೆದ್ದು ನೃತ್ಯವನಾಡಿದರು ೮೩

ಇಂತೊಪ್ಪುವ ಓಲಗದೊಳಗಿರ್ದನು
ಕಂತುಹರನು ಮಾದೇಶ
ಸಂತೋಷದಲಿ ಭಕ್ತರಿಗೆ ಮುಕ್ತಿಯಕೊಟ್ಟು
ಚಿಂತಾಯಕ ಕೃಪೆಯಿಂದ ೮೪

ಅಲ್ಲಲ್ಲಿ ಲಿಂಗವು ಅಲ್ಲಲ್ಲಿ ಜಂಗಮ
ಅಲ್ಲಲ್ಲಿ ಮುನಿ ತಪಸಿಗಳು
ಅಲ್ಲಲ್ಲಿ ಪರುವವು ಅಲ್ಲಲ್ಲಿ ಪರಿಷಯು
ಎಲ್ಲ ರಾವಿನೊಳೆಡೆವಿಡದೆ ೮೫

ಹರಿವಹಳ್ಳವು ಕೆರೆತೋಪಿನ ತಡಿಯಲ್ಲಿ
ಹಿರಿಯರು ಶಿವನ ಪೂಜೆಯನು
ಪರಿಮಳವುಳ್ಳ ಪತ್ರೆಯು ಪುಷ್ಪಮೊದಲಾಗಿ
ಹರನರ್ಚನೆಯ ಮಾಡುವರು ೮೬

ಬಿಂದಿಗೆ ಪಾನಾಲೆ ಅಡ್ಡಣಿಗೆಗಳನು
ತಂದು ಹರಿವಾಣದೊಳಿರಿಸಿ
ಚಂದವಾಗಿಯೆ ತಟ್ಟೆಬಟ್ಟಲು ಎಡೆಮಾಡಿ
ನಿಂದು ಕೈಮುಗಿದು ನಿಂತಿಹರು ೮೭

ಮೌನದಿಂದಲಿ ಜಪಧ್ಯಾನವು ಮಣಿಮಂತ್ರ
ಜ್ಞಾನಯತಿಗಳು ಮಾಡುವರು
ಭಾನುಪ್ರಕಾಶ ಲಿಂಗವು ಕರದಲ್ಲಿ ಸುಯಿ-
ದಾನಿ ಹಿರಿಯರೆಸೆದಿಹರು ೮೮

ಮಾಘ ಬಹುಳ ಚತುರ್ದಶಿ ಚಂದ್ರವಾರ ಶಿವ-
ಯೋಗವಾರಾತ್ರಿ ಜಾಗರದಿ
ಆಗಮಸ್ತೋತ್ರ ಮಂತ್ರವನಾಚರಿಸುತ
ಭೋಗಿಭೂಷಣನ ಅರ್ಚಿಪರು ೮೯

ಅಷ್ಟವಿಧಾರ್ಚನೆ ಷೋಡಶ ಉಪಚಾರ
ಇಷ್ಟಲಿಂಗಾರ್ಚನೆ ಮಾಡಿ
ಗಟ್ಟಿಗೊಳಿಸಿ ಮನವನು ಸಂಚರಿಸಿದ
ದಿಟ್ಟ ಮಹಾತ್ಮರಲ್ಲಿಹರು ೯೦

ಮಾಡಿತು ಪರಿಷೆ ಪರುವವ ಅಲ್ಲಲ್ಲಿಗೆ
ರೂಢಿಗೊಡೆಯನ ಮಲೆಯೊಳು
ಬೇಡಿದ ಪಂಚಾಮೃತವ ಜಂಗಮಕೆಡೆ
ಮಾಡಿಸಿದನು ಮಾದೇಶ ೯೧

ಹಪ್ಪಳುಪ್ಪಿನಕಾಯಿ ಕಡುಬು ಕಜ್ಜಾಯದಿ
ತುಪ್ಪತೈಲವು ಬೇಗದಲಿ
ತಪ್ಪದೆ ನೀಡಿಸಿದನು ಹಿರಿಯರಿಗೆ ಕಂ-
ದರ್ಪಹರನು ಮಾದೇಶ ೯೨

ಕುಂಬಳ ಬದನೆ ಬಾಳೆಯು ಹಾಗಲ ಹೀರೆ
ಯೆಂಬ ಕಾಯ್ಗಳ ಪಾಕಮಾಡಿ
ಸಂಬಾರದಿಂದಲೆಸೆವ ಪದಾರ್ಥವ
ಸಂಭ್ರಮದಿಂದ ನೀಡಿದರು ೯೩

ಗುಳ್ಳದಹಣ್ಣು ಮಾವಿನಕಾಯಿ ನಿಂಬೆಯು
ಅಲ್ಲಿ ಹೇರಿಳೆಯ ಹಣ್ಣುಗಳು
ಕಲ್ಲೆಡೆ ಮಾಗಳಿ ಕಳಲೆ ಉಪ್ಪಿನಕಾಯಿ
ನಿಲ್ಲದೆ ಎಡೆಮಾಡಿದರು ೯೪

ಬೀಸುಹೂರಿಗೆ ಗಾರಿಗೆ ಯೆಣ್ಣೆಹೂರಿಗೆ
ಲೇಸಾದ ಉದ್ದಿನ ಕಡುಬು
ಸೂಸಲುಂಡಲಿಗೆ ದೋಸೆಯು ಕಜ್ಜಾಯವ
ಈಶಜಂಗಮಕೆ ನೀಡಿದರು ೯೫

ಪಾಯಸ ತುಪ್ಪವು ಪರಿಕರ ಕೆಲದಲ್ಲಿ
ತೋಯು ಶಾಲ್ಯಾನ್ನದ ಭಕ್ಷ್ಯ
ಮಾಯಾಕೋಳಾಹಳನೆಂಬ ವಿರಕ್ತರಿಗೆ
ಕಾಯಜಹರನು ನೀಡಿಸಿದ ೯೬

ಭಕ್ತಮಹೇಶರು ಸತ್ಯ ಸದಾಚಾರಿ
ನಿತ್ಯಪ್ರಸಾದ ದೇಹಿಗಳು
ಕರ್ತೃವ ನೆನೆವ ಜನಕ್ಕೆ ಮಾದೇಶ್ವರ
ಆರ್ತಿಯಿಂದಲಿ ನೀಡಿಸಿದ ೯೭

ಹಾಲು ಸಕ್ಕರೆ ಜೇನು ಪಾನಕ ಎಳೆನೀರು
ಬಾಳೆಯ ಹಣ್ಣು ಬೇಗದಲಿ
ಶೂಲಧರನ ರೂಪು ತಾಳ್ದ ಜಂಗಮರಿಗೆ
ಕಾಲಹರನು ನೀಡಿಸಿದ ೯೮

ಉತ್ತರ ದಕ್ಷಿಣ ಪೂರ್ವ ಪಶ್ಚಿಮದೊಳು
ಮತ್ತೆ ಚರಿಸುವ ಜಂಗಮಕೆ
ನಿತ್ಯನೀಡಿಸಿದ ಮಾದೇಶ್ವರನಹುದೆಂದು ವಿ-
ರಕ್ತಮೂರ್ತಿಗಳು ಕೊಂಡಾಡೆ ೯೯

ಆರ್ತಿಯಿಂದಲಿ ಷಡುರುಚಿಯ ಮಹತ್ತಿಗೆ
ಭಕ್ತರದೇವ ನೀಡಿಸಿದ
ಮತ್ತೆ ದೇವಾಲಯಕೆ ಮಾದೇಶ್ವರ ಬಂದ
ಇತ್ತ ತಮ್ಮಡಿ ಬೆಳಗಾಗೆ ೧೦೦

ಬಂದರು ಮಾದೇಶ್ವರನ ಸೇವಕರಾಗ
ಗಂಧಪುಷ್ಪವು ಮೊದಲಾಗಿ
ಬಿಂದಿಗೆ ಅಗ್ಗಣಿ ಅಭಿಷೇಕವನಾಡಿ
ಚಂದದಿ ಪೂಜೆಮಾಡಿದರು ೧೦೧

ಕಾಣಿಕೆಯನು ಕೈಲಿಪಿಡಿದು ಕೂಡಿದಜನ
ಮಾಣದೆ ಭಯಭಕ್ತಿಯಿಂದ
ಕ್ಷೋಣಿಯೊಡೆಯ ಮಾದೇಶನ ಸೇವೆಗೆ
ಜಾಣರು ಸ್ತುತಿಸುತ ಬಹರು ೧೦೨

ಹೊನ್ನುಹಣವು ಕಾಸುಬಣ್ಣ ಭಂಗಾರದಿ
ಕಣ್ಣುಮಣಿಯು ಮೊದಲಾಗಿ
ಚನ್ನಮಾದೇಶ್ವರನಡಿಗೆ ಕಾಣಿಕೆಯಿಕ್ಕಿ
ಕನ್ನೆಸುತರ ಬೇಡಿಕೊಂಡು ೧೦೩

ಚಿನ್ನದ ಪುಷ್ಪ ಬೆಳ್ಳಿಯ ಪುಷ್ಪವ ತಂದು
ಚನ್ನಡಿಗಿರಿಸಿ ಕೈಮುಗಿದು
ಬಿನ್ನೈಸಿ ಬೇಡಿಕೊಂಡರು ಬೇಗ ಸತಿಯರು
ಎನ್ನೈಯ್ಯ ಸುತನ ಕೊಡೆಂದು ೧೦೪

ಭೂತ ಸೋಂಕಿದವರು ಬಂಜೆ ಬರಡಿಯರು
ಸೂತಕ ತಪ್ಪಿಯಿದ್ದವರು
ಭೀತಿಪಟ್ಟಿರುವಂಥ ಸತಿಯರು ದುರಿತಕ್ಕೆ
ಧಾತುಗುಂದಿಯೆ ಬರುತಿಹರು ೧೦೫

ವಾಸ ಕಂನಾಳೆಯು ನುಡಿಸಿಕೊಂಡು ಮಾ-
ದೇಶನಂಘ್ರಿಗೆ ನಮೋಯೆಂದು
ಭಾಷಪಾಲಕ ದುರಿತವ ಪೊದೆಯೆಂದು ಮಾ-
ದೇಶನ ಕೊಂಡಾಡಿದರು ೧೦೬

ದಕ್ಷನವೈರಿ ವೀರೇಶನೆ ದುರಿತವ
ಶಿಕ್ಷೆಮಾಡೆಂಮರೆ ಬೆಸಸಿ
ಆಕ್ಷಣದಲ್ಲಿ ಕೇಶಣ್ಣಗೆ ಪೊಪ್ಪಿಸೆ
ತತ್‌ಕ್ಷಣದಲಿ ಹೊರಡಿಸಿದ ೧೦೭

ದುರಿತಕ್ಕೆಕುಳಿತ ಸತಿಯರು ತಲೆದೂಗೆ
ತಿರುಗುತ್ತ ಮಾತನಾಡಿದರು
ಇರಲಮ್ಮೆವೆಂದು ಬೆರಳಕಚ್ಚಿ ಪ-
ಲ್ಗಿರಿದು ಬಿನ್ನೈಸಿದುವಾಗ ೧೦೮

ಬಿಟ್ಟೋಡುವ ಭೂತವ ಹಿಡಿತರಿನಾಗ
ಕಟ್ಟುಮಾಡಿದ ವೀರೇಶ
ಮುಟ್ಟಲಮ್ಮೆವು ನಿಮ್ಮ ಪಾದದಾಣೆಯು ಯೆಂದು
ಅಷ್ಟದಿಕ್ಕಿಗೆ ಓಡಿದುವು ೧೦೯

ವರಮು ಉದ್ದಂಡನೆ ಹರನ ಕುಮಾರನೆ
ಕರುಣಿಸು ವರವ ಬೇಗದಲಿ
ಹರಸಿ ಕಾಣಿಕೆಯಿಕ್ಕಿ ಕರುಣಿಯೆ ಸಲಹೆಂದು
ಕರವ ಮುಗಿದು ಬೇಡಿದರು ೧೧೦

ಬೇಡಿದ ವರವನು ಕೊಟ್ಟು ಮಾದೇಶ್ವರ
ರೂಢಿಯ ಜನರಿಗೆ ಬೇಗ
ಆಡಿದ ಲೀಲೆಯಿಂದಲಿ ಮಲೆಯೊಳು ಹೆರೆ-
ಸೂಡಿದ ಅಭವನೊಪ್ಪಿರ್ದ ೧೧೧

ಜಾತ್ರೆಯ ಪರಿಷೆ ಹರಿಯಿತು ತಮ್ಮೂರಿಗೆ
ಖ್ಯಾತಿಪಡೆದ ಲಿಂಗವನು
ಪ್ರೀತಿಯಿಂದಲಿ ಲಿಂಗವ ಕಳುಹಿದರಾಗ
ಭೂತಳದೊಡೆಯ ಮಾದೇಶ ೧೧೨

ಬಂದಜಹರಿ ಸುರಪತಿ ದಿಕ್ಪಾಲರ
ಇಂದುಧರನು ಕಳುಹಿದನು
ಎಂದಿನಂದದಿ ನಡುಮಲೆಯೊಳೊಪ್ಪಿರ್ದನು
ನಂದಿವಾಹನನು ಮಾದೇಶ ೧೧೩

ಸೃಷ್ಟಿಗಧಿಕ ಕೈಲಾಸವೆನಿಪ ನಡು-
ಬೆಟ್ಟದೊಳಗೆ ನೆಲಸಿರ್ದ
ಇಷ್ಟಾರ್ಥವರವನು ಬೇಗದಿ ಜನರಿಗೆ
ಕೊಟ್ಟನು ಮಾದೇಶ್ವರನು ೧೧೪

ಧರೆಯೊಳಧಿಕ ಮಾದೇಶನ ಚರಿತೆಯ
ವಿರಚಿಸಿದನು 'ಗುರುಸಿದ್ಧ'
ಗುರುಲಿಂಗ ಜಂಗಮ ಭಕ್ತಿಯಿಲ್ಲದೆ ಮತ್ತೆ
ಪೆರತೊಂದ ಹೇಳುವನಲ್ಲ ೧೧೫

ಬಿಡದೆ ಈಶಿವಕಥೆಯನು ಕೇಳಿದವರು ತಾವ್
ತಡೆಯದೆ ಮೋಕ್ಷಾರ್ಥವನು
ಪಡೆವರು ಸಂಪತ್ತು ಸಂತಾನ ಭೋಗವ
ಕೊಡುವನು ಮಾದೇಶ್ವರನು ೧೧೬

ಕಾಶಿ ಕೇದಾರ ಶ್ರೀಶೈಲ ರಾಮೇಶ್ವರ ವಿ-
ಶೇಷ ಕುಂಭದ ತೀರ್ಥವನು
ಸಾಸಿರವೇಳೆ ಸ್ನಾನವಮಾಡಿದ ಫಲವಿ
-ಶೇಷವು ಕೇಳ್ದ ಜನರಿಗೆ ೧೧೭

ಅನ್ನದಾನವು ಹೊನ್ನುದಾನ ಕನ್ಯಾದಾನ
ಉನ್ನತ ಉದಕ ದಾನವನು
ಮನ್ನಿಸಿ ಗೋವುವಾಸನ ಕೊಟ್ಟ ಫಲವಿದು
ಚೆನ್ನಾಗಿ ಕೇಳ್ದ ಜನರಿಗೆ ೧೧೮

ಈ ಶಿವಸಾಂಗತ್ಯ ಕೇಳಿದರಿಗೆ ಭವ-
ನಾಶವಹುದು ನಿಮಿಷದಲಿ
ಈಶನು ಕೈಲಾಸ ಪದವಿಯನೀವ ವಿ-
ಲಾಸದ ಸಂಧಿ ಪೂರಾಯ ೧೧೯

**ಅಂತು ಸಂಧಿ ೩ಕ್ಕಂ, ಪದನು ೩೬೦ಕ್ಕಂ, ಮಂಗಳಮಹಾ**
**ಶ್ರೀ ಶ್ರೀ ಶ್ರೀ.**





ಶ್ರೀ ಮಾದೇಶ್ವರ ಸ್ವಾಮಿಯವರು
ನವರತ್ನ ಕಿರೀಟದಿಂದ ರುದ್ರಾಕ್ಷಿ ಮಂಟಪದಲ್ಲಿ



ಶ್ರೀ ಮಾದೇಶ್ವರ ದೇವಾಲಯದಲ್ಲಿರುವ
ಆಲಂಬಾಡಿ ಬಸವೇಶ್ವರ ದ್ವಾರ



ಶ್ರೀ ಮಾದೇಶ್ವರ ಸಾಂಗತ್ಯವನ್ನು ಭಕ್ತಿಯಿಂದ ಪ್ರಕಟಿಸಿರುವ
ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ
**ವೇ|| ಬ ಶಿವಮೂರ್ತಿ ಶಾಸ್ತ್ರಿಗಳು**
ಸಂಪಾದಕರು-'ಶರಣ ಸಾಹಿತ್ಯ' ಬಂಗಳೂರು

## ಅನುಬಂಧ–೧

# ‘ಮಾದೇಶ್ವರ ಸಾಂಗತ್ಯ’ದ ಓದುಗರು ತಿಳಿದಿರಬೇಕಾದ ಸಂಗತಿಗಳು

೧. **ನಿರಂಜನವಂಶ ರತ್ನಾಕರ:** ಈ ಗ್ರಂಥವು ಬಿಜಾಪುರದ ಶಿವಾನುಭವ ಗ್ರಂಥಮಾಲೆಯಲ್ಲಿ ೧೯೩೨ನೇ ವರ್ಷದಲ್ಲಿ ಅಚ್ಚಾಗಿದೆ. ಇದರಲ್ಲಿ ಶ್ರೀ ಮಾದೇಶ್ವರನು ಶೂನ್ಯಸಿಂಹಾಸನದ ೬ನೇ ಪಟ್ಟದ ನಿರ್ಮಾಯ ಗಣೇಶ್ವರನೆಂದು ಅಭಿವರ್ಣಿಸಲ್ಪಟ್ಟಿರುತ್ತದೆ. ಇದರಲ್ಲಿರುವ ‘ಮಾದೇಶ್ವರ ಚರಿತ್ರೆ’ ಇತಿಹಾಸ ಸಮ್ಮತವಾಗಿದೆ. ಈ ಗ್ರಂಥಸ್ಥ ವಿಷಯಗಳನ್ನು ಶ್ರೀಮಲೆ ಮಾದೇಶ್ವರ ಸ್ಥಳಪುರಾಣದಿಂದ ಕವಿ ಸಂಗ್ರಹಿಸಿದಂತೆ ಹೇಳಿದ್ದಾನೆ ಈ ಗ್ರಂಥದ ಕವಿ ವಿಷಯವನ್ನು ತಿಳಿದು ಬರೆದಿದ್ದಾನೆ ಆದುದರಿಂದ ಈ ಗ್ರಂಥಸ್ಥ ವಿಷಯಗಳು ಬಹುಪುಟ್ಟಿಗೂ ಇತಿಹಾಸ ಸಮ್ಮತವಾಗಿ ನಂಬಲರ್ಹವಾಗಿವೆ. ಈ ಸ್ಥಳ ಪುರಾಣ ನಮಗೆ ಸಿಕ್ಕಿಲ್ಲ ಈ ರತ್ನಾಕರದಲ್ಲಿ ಮಾದೇಶ್ವರನ ಬಗ್ಗೆ ಹೇಳಿರುವ ವಿಷಯವನ್ನು ಸಂಗ್ರಹಿಸಿ ಕೊಟ್ಟಿದೆ

೨. **ಸುತ್ತೂರು ವೀರಸಿಂಹಾಸನ ಗುರುಪರಂಪರೆ.** ಇದು ಷಟ್ಪದೀ ಗ್ರಂಥ ಮೈಸೂರಿನಲ್ಲಿ ಅಚ್ಚಾಗಿದೆ (೧೯೩೩) ಮೈಸೂರಿನ ಕೈ॥ ಸಿ ಸಂಗಪ್ಪಶಾಸ್ತ್ರಿಗಳಿಂದ ವಿರಚಿತವಾಗಿದೆ. ಈ ಗ್ರಂಥದಲ್ಲಿ ಮಾದೇಶ್ವರ ಚರಿತ್ರೆಗೆ ಸಂಬಂಧಪಟ್ಟ ಕೆಲಸಂಗತಿಗಳಿವೆ. ಇದರಲ್ಲಿ ಶ್ರೀ ಶೈಲದಲ್ಲಿ ಜಂಗಮರ ತಿಂಥಿಣಿಗೆ ಮಾದೇಶ್ವರನು ವಟುರೂಪದಲ್ಲಿ ಮೊದಲು ಸಂದರ್ಶನ ವಿತ್ತಂತೆಯೂ, ಮುಂದೆ ಸ್ವಾಮಿಯು ಸುತ್ತೂರಿಗೆ ಬಂದು ಕೆಲಕಾಲ ಇದ್ದಂತೆಯೂ ಹಲವು ಪವಾಡಗಳನ್ನು ಮೆರೆದಂತೆಯೂ ಹೇಳಿದೆ. ಇದಕ್ಕೆ ಸುತ್ತೂರು ಮಠದಲ್ಲಿರುವ ಮಾದೇಶ್ವರ ಗದ್ದಿಗೆ, ಸೋಮೇಶ್ವರ ಗುಡಿಯಲ್ಲಿರುವ ಪವಾಡದ ರಾಗಿ ಕಲ್ಲು ಇವು ಪ್ರತ್ಯಕ್ಷ ನಿದರ್ಶನಗಳಾಗಿವೆ ಮಾದೇಶ್ವರ ಜಾತ್ರೆಗೆ ಹೋಗಿ ಬರುವ ಜನ ಇಲ್ಲಿಗೂ ಬಂದು ಹೋಗುವುದರಿಂದ ಈ ಗ್ರಂಥಸ್ಥ ವಿಷಯವು ನಂಬಲರ್ಹವಾಗಿದೆ. ಶ್ರೀ ಮಠಕ್ಕೆ ಸಂಬಂಧಪಟ್ಟ ಶಾಸನಗಳೂ ಗ್ರಂಥಗಳೂ ಪ್ರಸಿದ್ಧವಾಗಿವೆ. ಇದರಿಂದ ಮಠದ ಪ್ರಾಚೀನತೆ ತಿಳಿಯಬಹುದು.

೩. **ಕುಂತೂರು ವೀರಸಿಂಹಾಸನ ಮಠ:** ಶ್ರೀ ಮಾದೇಶ್ವರನು ಮೊದಲು ಕೊಳ್ಳೇಗಾಲ ತಾಲ್ಲೂಕು ಕುಂತೂರಿನಲ್ಲಿದ್ದ ವಿಷಯ ಪ್ರಸಿದ್ಧವಾಗಿದೆ ಈ ಭಾಗದಲ್ಲಿ ಮಾದೇಶ್ವರನನ್ನು ಕುರಿತಾದ ದಂತಕತೆಗಳು ಈಗಲೂ ರೂಢಿಯಲ್ಲಿವೆ ಕುಂತೂರು ಬೆಟ್ಟದ ಬುಡದಲ್ಲಿ ಮಾದೇಶ್ವರ ಮಂಡಿಯೂರಿದ ಸ್ಥಳವಿದೆ ಅಲ್ಲಿ ಮಂಟಪ ಕಟ್ಟಿಪೂಜಿ

ಸುತ್ತಿದ್ದಾರೆ. ಈ ಕುಂತೂರಿನಲ್ಲಿ ಒಂದು ವೀರಸಿಂಹಾಸನ ಮಠವಿದೆ ಕುಂತೂರು ಮಠದ ಸ್ವಾಮಿಗಳು ಮಾದೇಶ್ವರನ ಅಪ್ಪಣೆಯಂತೆ ತಮ್ಮಡಿಗಳ ಮೂಲಪುರುಷನಾದ ಭಿಲ್ಲಯ್ಯನಿಗೂ ಇವನ ಪತ್ನಿ ಅನ್ನಸಾಲಮ್ಮನಿಗೂ ಲಿಂಗಧಾರಣ ಮಾಡಿದಂತೆ ಸಾಂಗತ್ಯದಲ್ಲಿ ಹೇಳಿದೆ. ಹೈದರಲ್ಲಿ ಶಾಸನದಲ್ಲಿ ಈ ಕುಂತೂರು ಮಠವು ಬಾಳೇಹಳ್ಳಿ ಸಿಂಹಾಸನಕ್ಕೆ ಸೇರಿದ ಮಠವೆಂದು ಹೇಳಿದೆ ಅಲ್ಲದೆ ಭಿಲ್ಲಯ್ಯನಿಗೆ ಲಿಂಗಧಾರಣ ಮಾಡಿದ ವಿಷಯವನ್ನೂ ಹೇಳಿದೆ ಈ ಕುಂತೂರು ಮಠಕ್ಕೂ ನಡುಮಲೆಯಲ್ಲಿರುವ ಸಾಲೂರು ಮಠಕ್ಕೂ ನಿಕಟ ಸಂಬಂಧವುಂಟೆಂದೂ ಕೆಲವು ಶಿಲಾಶಾಸನಗಳೂ ತಾಮ್ರ ಶಾಸನಗಳೂ ಮಠದಲ್ಲಿ ಉಂಟೆಂದೂ ತಿಳಿದುಬಂದಿದೆ. ಆ ಶಾಸನಗಳೂ ಆಧಾರಗಳೂ ನಮ್ಮ ಗಮನಕ್ಕೆ ಬಂದಿದ್ದರೆ ಈ ಬಗ್ಗೆ ಹೆಚ್ಚು ಸಂಗತಿಗಳನ್ನು ಹೇಳಬಹುದಾಗಿತ್ತು ಪ್ರಾಚೀನ ಕಾಲದಲ್ಲಿ ಕುಂತೂರು ಮಠವು ಅತ್ಯಂತ ಕೀರ್ತಿಗೌರವಗಳಿಂದ ಬೆಳಗಿರಬೇಕೆಂದು ತೋರುತ್ತದೆ. ಶ್ರೀ ಮಾದೇಶ್ವರನು ಕುಂತೂರು ಪಕ್ಕದಲ್ಲಿರುವ ಪ್ರಭುಲಿಂಗನ ಬೆಟ್ಟದಲ್ಲಿ ಆದಿಗಣನಾಥನ ಸೇವೆಯಲ್ಲಿ ಇದ್ದಂತೆ ತಿಳಿದುಬಂದಿದೆ

**೪. ಪಂಚಮಹಾ ಮಠಗಳು** ಶ್ರೀ ಮಾದೇಶ್ವರ ಸಾಂಗತ್ಯದಲ್ಲಿಯೂ, ಹೈದರಲ್ಲಿ ಶಾಸನದಲ್ಲಿಯೂ ನಂಜನಗೂಡು, ಸುತ್ತೂರು, ವಂಡರಬಾಳು, ಕುಂತೂರು ಮತ್ತು ಎರಗಂಬಳ್ಳಿ ಎಂಬ ಊರುಗಳ ಪಂಚಮಠಗಳ ಹೆಸರುಗಳು ಗಣ್ಯತೆಯನ್ನು ಪಡೆದಿವೆ ಶ್ರೀ ಮಾದೇಶ್ವರನ ಕಾಲದಲ್ಲಿ ಮೇಲೆ ಕಂಡ ಐದು ಮಠಗಳೂ ಈ ಭಾಗದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದುವೆಂದು ಹೇಳಬಹುದು ಪ್ರಖ್ಯಾತ ಹಾಡುಗಬ್ಬಕಾರನಾದ ಶ್ರೀ ಮುಪ್ಪಿನ ಷಡಕ್ಷರಸ್ವಾಮಿಯು ಎರಗಂಬಳ್ಳಿ ಮಠದವನೆಂದು ತಿಳಿದುಬಂದಿದೆ ಪ್ರಸಿದ್ಧ ವಚನಕಾರರಾದ ಶ್ರೀ ಘನಲಿಂಗಿದೇವರು ಶ್ರೀ ಸುತ್ತೂರು ವೀರಸಿಂಹಾಸನಕ್ಕೆ ಅಧಿಪತಿಯಾಗಿದ್ದ ವಿಷಯ ಪ್ರಸಿದ್ಧವಾಗಿಯೇ ಇದೆ ಹೈದರಲ್ಲಿ ತಾಮ್ರ ಶಾಸನದಲ್ಲಿ ಈ ಪಂಚ ಮಠದ ಕರ್ತರ ಹೆಸರುಗಳು ಬಂದಿವೆ

**೫ ತಮ್ಮಡಿಗಳ ಮನೆತನ.** ಶ್ರೀ ಮಾದೇಶ್ವರನ ಅರ್ಚಕರಾಗಿ ನೂರಾರು ವರ್ಷಗಳಿಂದ ಮಲೆಯಲ್ಲಿ ಪ್ರಸಿದ್ಧರಾಗಿರುವ ತಮ್ಮಡಿಗಳು, ಭಿಲ್ಲಯ್ಯ-ಅನ್ನಸಾಲಮ್ಮ ಇವರ ವಂಶಸ್ಥರು ಭಿಲ್ಲಯ್ಯನ ಮಗ ಕೇಶಣ್ಣೊಡೆಯ, ಅವನ ಮಗ ಬೀರಯ್ಯ ಇವನ ವಂಶದಲ್ಲಿಯೇ ಪ್ರಸಿದ್ಧರಾದ ಎಲ್ಲತಮ್ಮಡಿ, ಕಾಳಮಾದ, ಕೆಂಪುಮಾದ, ಚಿಣ್ಣಮಾದ, ಬೋಳಮಾದ, ತೋಳಮಾದ ಮೊದಲಾದ ತಮ್ಮಡಿಗಳು ಪ್ರಸಿದ್ಧರಾಗಿದ್ದಾರೆ ಇವರಲ್ಲಿ ದುಂಡಯ್ಯ ಎಂಬುವನು ತಮ್ಮಡಿಗಳ ಶಿಖಾಮಣಿ ಎನಿಸಿಕೊಂಡಿದ್ದಾನೆ. ಹೈದರಲ್ಲಿ ಶಾಸನದಲ್ಲಿ ತಮ್ಮಡಿಗಳನ್ನು 'ಅನ್ನಸಾಲಮ್ಮನ ವಂಶಸ್ಥರು' ಎಂದು ಹೇಳಲಾಗಿದೆ.

ಹೈದರಲ್ಲಿ ಶಾಸನ ಮತ್ತು ಕಂಪನಿ ಸರ್ಕಾರದ ತಹನಾಮೆಗಳಿಂದ ತಮ್ಮಡಿಗಳು ಶ್ರೀ ಮಾದೇಶ್ವರನ ಅರ್ಚನೆಯನ್ನು ಬಹು ಕಾಲದಿಂದ ಮಾಡಿಕೊಂಡಿದ್ದಾರೆಂದು

ಸ್ಪಷ್ಟವಾಗುತ್ತದೆ. ಮಾದೇಶ್ವರ ಸಾಂಗತ್ಯದಲ್ಲಿ ಕೂಡ ಇವರೇ ಈ ಕ್ಷೇತ್ರದ ಮೂಲ ನಿವಾಸಿಗಳೆಂದು ಹೇಳಿದೆ.

೬. **ಸಾಲೂರು ಮಠ:** ಶ್ರೀ ಮಾದೇಶ್ವರ ಕ್ಷೇತ್ರದಲ್ಲಿ ಸಾಲೂರು ಮಠವು ಪ್ರಸಿದ್ಧವಾಗಿದೆ. ಇದನ್ನು ಸಂಸಾರಿ ಸಂಗಪ್ಪ ಸ್ಥಾಪಿಸಿದನೆಂದೂ ಸಾಲೂರು ಸ್ವಾಮಿ ಎಂಬುವರು ಇದಕ್ಕೆ ಮೊದಲು ಸ್ವಾಮಿಗಳಾದರೆಂದೂ ತಿಳಿದುಬರುತ್ತದೆ. ಈ ಬೆಟ್ಟದಲ್ಲಿ ಲಿಂಗಧಾರಣಾದಿ ಮಹತ್ಕಾರ್ಯಗಳನ್ನೂ ದೇವಾಲಯದ ಅಭಿವೃದ್ಧಿ ಕಾರ್ಯಗಳನ್ನೂ ಈ ಮಠದ ಸ್ವಾಮಿಗಳು ಬಹಳವಾಗಿ ನಡೆಸಿದ್ದಾರೆ. ಈಗಲೂ ದೇವಾಲಯದಲ್ಲಿ ಪೂಜಾದಿ ಸಂದರ್ಭಗಳಲ್ಲಿ ಈ ಮಠದ ಸ್ವಾಮಿಗಳಿಗೆ ಅಗ್ರತಾಂಬೂಲವಿದೆ. ಶ್ರೀ ಮಾದೇಶ್ವರ ದೇವಾಲಯಕ್ಕೂ ಸಾಲೂರುಮಠಕ್ಕೂ ನಿಕಟ ಸಂಬಂಧವಿದೆ. ಇದು ಈ ಕ್ಷೇತ್ರಕ್ಕೆ ಬಂದವರಿಗೆ ಆಶ್ರಯ ಸ್ಥಾನವೆನಿಸಿದೆ.

೭. **ಆಲಂಬಾಡಿ ಬೇಡಗಂಪಣ ರಾಜ್ಯ:** ಈ ನಡುಮಲೆಯ ಕ್ಷೇತ್ರದಲ್ಲಿ ಮಾದೇಶ್ವರನು ಬಂದಾಗ ಸೋಲಿಗರು, ಕುರುಬರು, ಬೇಡರು ಮಾತ್ರ ಇದ್ದಂತೆ ಕಂಡುಬಂದಿದೆ. ಆಗ ಈ ಭಾಗಕ್ಕೆ 'ಬೇಡ ಗಂಪಣ ರಾಜ್ಯ' ಎಂಬ ಹೆಸರಿದ್ದಂತೆ ವಿದಿತವಾಗಿದೆ. ಇದಕ್ಕೆ ರಾಯಣ್ಣನಾಯಕ ಅಧಿಪತಿಯಾಗಿದ್ದಂತೆಯೂ ಮಾದೇಶ್ವರನ ಸೇವೆಗೆ ಈ ರಾಯಣ್ಣ ಕೆಲವು ಭೂಮಿಯನ್ನು ಕೊಟ್ಟಂತೆಯೂ ಸಾಂಗತ್ಯ ಗ್ರಂಥದಲ್ಲಿ ಹೇಳಿದೆ. ಹೈದರಲ್ಲಿ ಶಾಸನದಲ್ಲಿಯೂ ರಾಯಣ್ಣನ ಹೆಸರು ಬಂದಿದೆ. ರಾಯಣ್ಣನೇ ಭೂಮಿಯ ಪಟ್ಟಿಗಾರನೆಂದು ಹೇಳಿದೆ. ರಾಯಣ್ಣನ ಮಗಳು ದೇವಕಿಯನ್ನು ಕೊಂಗರಾಜ ಬಯಸಿ ಯುದ್ಧಕ್ಕೆ ಬರಲು ಮಾದೇಶ್ವರ ಕೃಪೆಯಿಂದ ರಾಯಣ್ಣ ಯುದ್ಧಮಾಡಿ ಕೊಂಗರನ್ನು ಓಡಿಸಿದ ಕಥೆ ಸಾಂಗತ್ಯದಲ್ಲಿ ವಿಸ್ತಾರವಾಗಿದೆ. ಈ ವಿಚಾರ ತಾಮ್ರಶಾಸನದಲ್ಲಿಯೂ ಇದೆ. 'ಆಲಂಬಾಡಿ' ಹೆಸರು ಹಾಡುಗಳಲ್ಲಿಯೂ ಇದೆ. ತಾಮ್ರ ಶಾಸನದಲ್ಲಿಯೂ ಐದೆ.

ಈ ಬೇಡಗಂಪಣ ರಾಜ್ಯಕ್ಕೆ ರಾಜಧಾನಿ ಆಲಂಬಾಡಿ. ಈಗ ಈ ಗ್ರಾಮ ನಾಶವಾಗಿದೆ. ಮಾದೇಶ್ವರ ಗುಡಿಯಲ್ಲಿ ಗರ್ಭಗುಡಿ ಕಟ್ಟಿಸಿದ ಜುಂಜೇಗೌಡನು ಈ ಆಲಂಬಾಡಿಯವನು ಎಂದು ಹೈದರಲ್ಲಿ ಶಾಸನದಲ್ಲಿದೆ.

೮. **ಈ ಚರಿತ್ರೆಗೆ ಸಂಬಂಧಿಸಿದ ಕೆಲವು ಮಹನೀಯರು:** ಶ್ರೀ ಮಾದೇಶ್ವರ ಸಾಂಗತ್ಯದಲ್ಲಿಯೂ, ಹೈದರಲ್ಲಿ ಶಾಸನದಲ್ಲಿಯೂ, ಜನಪದ ಸಾಹಿತ್ಯದಲ್ಲಿಯೂ ಮಾದೇಶ್ವರ ಚರಿತ್ರೆಗೆ ಸಂಬಂಧಪಟ್ಟಂತೆ ಹಲವು ಮಂದಿ ಮಹನೀಯರ ಹೆಸರುಗಳು ಬಂದಿವೆ. ಇವರಲ್ಲಿ ಸಂಸಾರಿ ಸಂಗಪ್ಪ, ಭಕ್ತ ಕಾರಯ್ಯ [ಸೋಲಿಗ] ವಿರಕ್ತ ಹಂಪಯ್ಯ, ಸರಗೂರಯ್ಯ [?] ಬಿಲ್ಲಯ್ಯನ ಮಗ ಕೇಶಣ್ಣೊಡೆಯ, ಭಿಂಡೇಹಳ್ಳಿ ಆಚಾರಿ, ಕೇಶಣ್ಣನಮಗ ಬೀರಯ್ಯ, ಹೊನ್ನಿದೇವ [?] ಕುಂತೂರುಮಠದ

ಸ್ವಾಮಿಗಳು [?] ಸರಗೂರು ಉಪ್ಪಲಿಗಶೆಟ್ಟಿ [?] ಇತ್ಯಾದಿಗಳು ಇವರಲ್ಲಿ ಮುಖ್ಯರು ಸರಗೂರಯ್ಯ ಹುಲಿಮೇಲೆ ಹತ್ತಿಕೊಂಡು ಮಲೆಯಲ್ಲಿ ಮಾದೇಶ್ವರನ ಸಂಗಡ ಓಡಾಡಿದಂತೆ ದಂತ ಕಥೆಗಳಿವೆ. ಈತನು ಮಹಾತ್ಮನಂತೆ ಕಾಣುತ್ತದೆ

೯. ಹೈದರಲ್ಲಿಖಾನ್ ತಾಮ್ರಶಾಸನ ಮೈಸೂರು ಚರಿತ್ರೆಯಲ್ಲಿ ವಿಖ್ಯಾತನಾದ ಬಹದ್ದೂರ್ ಹೈದರಲ್ಲಿಖಾನ್ [ಕಿ ಶ ೧೭೬೧ರಿಂದ] ಶ್ರೀರಂಗಪಟ್ಟಣದಲ್ಲಿ ಸರ್ವಾಧಿಕಾರಿಯಾಗಿ ಅಧಿಕಾರ ನಡೆಸಲು ಮೊದಲು ಮಾಡಿದನು. ಅಲ್ಲಿಂದ ಟೀಪುವಿನ ಮರಣ ಪರ್ಯಂತ [ಕ್ರಿ ಶ. ೧೭೯೯ರವರೆಗೆ] ರಾಜ್ಯಸೂತ್ರಗಳು ಹೈದರ್ ಮತ್ತು ಟೀಪುಗಳ ವಶದಲ್ಲೇ ಇದ್ದುದು ಸರಿಯಷ್ಟೆ. ಹೀಗೆ ಹೈದರನು ಸರ್ವಾಧಿಕಾರ ಪ್ರಾರಂಭಿಸಿದ ೧೪ ವರ್ಷಗಳ ಅನಂತರ ಶ್ರೀ ಮಾದೇಶ್ವರ ಸನ್ನಿಧಿಗೆ ಶಾಲಿವಾಹನಶಕ ೧೭೯೮ನೇ ದುರ್ಮುಖಿ ಸಂವತ್ಸರದ ಶ್ರಾವಣ ಶುದ್ಧ ೩ರಲ್ಲಿ ಈ ತಾಮ್ರಶಾಸನ ಕೊಟ್ಟಿದ್ದಾನೆ. ಈ ತಾಮ್ರಶಾಸನದಲ್ಲಿ ಮಾದೇಶ್ವರ ಚರಿತ್ರೆಗೆ ಸಂಬಂಧಪಟ್ಟ ಹಲವು ಸಂಗತಿಗಳಿವೆ. ಸಾಂಗತ್ಯದ ಕಥೆಗೂ ಹೊಂದಿಕೆಯಾಗುತ್ತದೆ. ಅಲ್ಲದೆ ಆ ಕಾಲದಲ್ಲಿ ಕೂಡ ತಮ್ಮಡಿಗಳು ದೇವರ ಅರ್ಚಕರಾಗಿದ್ದರೆಂಬ ವಿಷಯ ಸ್ಪಷ್ಟವಾಗಿದೆ. ಈ ಶಾಸನದಲ್ಲಿ ಸ್ವಾಮಿಯ ಸೇವೆಗೆ ಯಾರು ಅರ್ಹರೆಂಬ ಬಗ್ಗೆ ದೂರು ಬಂದಾಗ ಹೈದರ್ ವಿಚಾರಣೆಮಾಡಿ ಯೋಗ್ಯ ತೀರ್ಮಾನ ಕೊಟ್ಟಿದ್ದಾನೆ.

ಈ ಶಾಸನದಲ್ಲಿ ಕುಂತೂರು ಮಠದ ಸ್ವಾಮಿಗಳು 'ಬೇಡಗಂಪಣಕೆ' ಲಿಂಗ ಧಾರಣ ಮಾಡಿದ ವಿಷಯವಿದೆ ರಾಮಣ್ಣ ನಾಯಕನೂ ಅವನ ಮಂಡಲಿಯವರೂ ಕೊಂಗರ ಸೈನ್ಯ ಬಂದಾಗ ತುಂಗಭದ್ರಾ ನದಿ [?] ದಾಟಿದಂತೆ ಶಾಸನದಲ್ಲಿ ಹೇಳಿದೆ. ಆದರೆ ಇದು ತಪ್ಪು. ಇಲ್ಲಿ ಹರಿಯತಕ್ಕ ನದಿ ಕಾವೇರಿ. ಇದನ್ನು ತಿಳಿಯದೆ ಶಾಸನ ಕೊರೆದವರು ನದಿ ಹೆಸರು 'ತುಂಗಭದ್ರಾ' ಎಂದು ತಪ್ಪುಬರೆದಿದ್ದಾರೆ. ಈ ಶಾಸನದಲ್ಲಿ "ಗಟ್ಟಿಮದನಾರಿಯಿಂದ ವಿಸ್ತಾರವಾಗಿ ದೇವಸ್ಥಾನ ವೃದ್ಧಿಸಿ" ಎಂದು ಹೇಳಿದೆ. ದೇವಸ್ಥಾನವನ್ನು ವಿಸ್ತರಿಸಿ ಕಟ್ಟಿಸಿದ ಈ 'ಗಟ್ಟಿ ಮದನಾರಿ' ಯಾರೆಂಬುದು ತಿಳಿದುಬಂದಿಲ್ಲ. ಈ ಬಗ್ಗೆ ಸಂಶೋಧನೆ ಅಗತ್ಯವಾಗಿದೆ.

ಈ ಶಾಸನದಲ್ಲಿ ಬಹದ್ದೂರ್ ಹೈದರಲ್ಲಿ ಖಾನ್ ಮಾದೇಶ್ವರಸ್ವಾಮಿಯವರನ್ನು ಕುರಿತು 'ಜಗದ್ಗುರುವಾದ ಮಾದೇಶ್ವರ ಸ್ವಾಮಿ' ಎಂದು ಬರೆಸಿರುವುದು ಗಮನಾರ್ಹವಾಗಿದೆ. ಈ ಶಾಸನವು ಹೈದರಲ್ಲಿಯ ಪರಮತ ಸಹಿಷ್ಣುತೆಗೂ ನ್ಯಾಯನಿಷ್ಠೆಗೂ ಕೈಗನ್ನಡಿಯಂತಿದೆ. ಈ ಶಾಸನಹುಟ್ಟಿ ೧೭೮ವರ್ಷಗಳಾಗಿವೆ. ಶಾಸನದ ಮೇಲೆ ಸೂರ್ಯ, ಚಂದ್ರ, ಲಿಂಗ, ಬಸವ ಈ ಗುರುತುಗಳಿವೆ. ಈ ಶಾಸನವು ಅರ್ಚಕರ ವಶದಲ್ಲಿದೆ.

೧೦. ಕಂಪನಿಯವರ ತಹನಾಮೆ. ಈ ತಹನಾಮೆಯು ತಮಿಳು ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಇದನ್ನು ೧೮೪೩ನೇ ಫೆಬ್ರವರಿ ೧೬ರಲ್ಲಿ ಕೊಯಮುತ್ತೂ

ರಿನಲ್ಲಿ ಬರೆಸಲಾಗಿದೆ ಇಂದಿಗೆ ಈ ತಹನಾಮೆ ಹುಟ್ಟಿ ೧೧೩ ವರ್ಷಗಳಾಗಿವೆ. ಕಂಪನಿ ಸರ್ಕಾರದವರು ಕಾಡುಮಾದ ತಮ್ಮಡಿಯನ್ನು ಶ್ರೀ ಮಾದೇಶ್ವರ ದೇವಾಲಯಕ್ಕೆ ಧರ್ಮಕರ್ತನನ್ನು ಮಾಡಿದ ಸಂಗತಿ ಇದರಲ್ಲಿದೆ. ಈ ತಹನಾಮೆಯು ಇಂಗ್ಲಿಷರ ನ್ಯಾಯನಿಷ್ಠೆಗೆ ಒಂದು ನಿದರ್ಶನವಾಗಿದೆ ಇದರ ಮೂಲ ತಮಿಳು ಭಾಷೆಯಲ್ಲಿದೆ. ವಾಚಕರ ಅವಗಾಹನೆಗಾಗಿ ಅದರ ಸಾರವನ್ನು ಕನ್ನಡದಲ್ಲಿ ಕೊಟ್ಟಿದೆ.

೧೧. **ಜನಪದ ಸಾಹಿತ್ಯದಲ್ಲಿ ಮಾದೇಶ್ವರ:** ಶ್ರೀ ಮಾದೇಶ್ವರನನ್ನು ಕುರಿತು ಕವಿಗಳು ಕಾವ್ಯಕಟ್ಟಿದ್ದಾರೆ. ರಾಜರು ಶಾಸನ ಬರೆದಿದ್ದಾರೆ ಅದರೆ ಅದಕ್ಕೂ ಹೆಚ್ಚಾಗಿ ಜನರು ಭಕ್ತಿಯಿಂದ ಗೀತೆಗಳನ್ನು ರಚಿಸಿ ಹಾಡುತ್ತಿದ್ದಾರೆ. 'ಶಿವರಾತ್ರಿ' ಮೊದಲಾದ ಕಾಲಗಳಲ್ಲಿ ಜಾತ್ರೆಗಳಿಗೆ ಬರುವ ಜನರು ಈ ಗೀತೆಗಳನ್ನು ಉತ್ಸಾಹದಿಂದ ಹಾಡಿಕೊಂಡು ಕ್ಷೇತ್ರಕ್ಕೆ ಬರುವುದನ್ನು ಕೇಳಬಹುದು ಈ ಜನಪದ ಗೀತೆಗಳು ಇತಿಹಾಸ ಸಮ್ಮತವಾಗಿವೆ. ಅಲ್ಲದೆ ಶ್ರೀ ಮಾದೇಶ್ವರಸ್ವಾಮಿಯ ಜನಪ್ರಿಯತೆಗೆ ಒಳ್ಳೆಯ ನಿದರ್ಶನವಾಗಿವೆ ಇಂತಹ ಅನೇಕ ಗೀತೆಗಳಿದ್ದರೂ ಕೇವಲ ಮೂರು ಗೀತೆಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

೧೧. **ಪ್ರಚಾರದಲ್ಲಿರುವ ದಂಥಕತೆಗಳು:** ಶ್ರೀ ಮಾದೇಶ್ವರನನ್ನು ಕುರಿತು ನಡುಮಲೆ ಕ್ಷೇತ್ರ, ಕುಂತೂರು, ಸುತ್ತೂರು, ನೀಲಗಿರಿ ಮೊದಲಾದ ಕಡೆ ಹಲವಾರು ದಂತಕಥೆಗಳು ಪ್ರಚಾರದಲ್ಲಿವೆ. ಬೇವಿನಕಾಳಿಯನ್ನು ಜೈಸಿದುದು, ಜಂಗಮರನ್ನು ಸೆರೆಹಾಕಿದ ಶ್ರಮಣನನ್ನು ನಿಗ್ರಹಿಸಿದುದು, ರಂಗನಾಥನನ್ನು ಕಾಪಾಡಿದ್ದು, ಆನೆಗಳನ್ನು ಅನುಗ್ರಹಿಸಿದ್ದು, ಕೊಂಗರಾಜರ ಮೇಲೆ ಯುದ್ಧಮಾಡಿದ್ದು [?] ಮೊದಲಾದ ಕಥೆಗಳು ಜನರಲ್ಲಿ ಬಳಕೆಯಲ್ಲಿವೆ ಇವೆಲ್ಲಕ್ಕೂ ನಿಖರವಾಗಿ ಇತಿಹಾಸದ ಬೆಲೆ ಕೊಡಲು ಸಾಧ್ಯವಿಲ್ಲವಾದರೂ ಮಾದೇಶ್ವರನು ಹಲವಾರು ಮಹಿಮೆಗಳನ್ನು ತನ್ನ ಯೋಗಶಕ್ತಿಯಿಂದ ಮಾಡಿರುವನೆಂದು ತಿಳಿಯಬಹುದಾಗಿದೆ. ಈ ಕಾರಣದಿಂದಲೇ ಮಾದೇಶ್ವರನನ್ನು ಕುರಿತು ಜನ ಸಾಮಾನ್ಯರು ಭಕ್ತಿಯಿಂದ ಸಾಹಿತ್ಯವನ್ನು ಕಟ್ಟಿ ಹಾಡಿದರೆಂದು ತೋರುತ್ತದೆ.

೧೩. **ಶ್ರೀ ಮಾದೇಶ್ವರ ತೋರುಗದ್ದಿಗೆಗಳು:** ಮೈಸೂರು, ಕೊಳ್ಳೇಗಾಲ, ನೀಲಗಿರಿ, ಕೊಯಮುತ್ತೂರು ಮೊದಲಾದ ಕಡೆಗಳಲ್ಲಿ ಹಲವಾರು ಮಾದೇಶ್ವರ ಗದ್ದಿಗೆಗಳೂ ದೇವಾಲಯಗಳೂ ಉಂಟು. ನಿಜವಾಗಿಯೂ ಮಾದೇಶ್ವರರು ಲಿಂಗವಾದುದು ನಡುಮಲೆಯಲ್ಲಿ ಮಾತ್ರ. ಅದೇ ಅವರ ನಿಜವಾದ ಸಮಾಧಿಯಾಗಿದೆ. ಆದರೆ ಅವರು ಸಂಚರಿಸಿದ ಸ್ಥಳಗಳಲ್ಲಿ ಜನರು ತೋರುಗದ್ದಿಗೆಗಳನ್ನು ಮಾಡಿಸಿರಬೇಕೆಂದು ತೋರುತ್ತದೆ. ಮಾದಯ್ಯ, ಮಾದಮ್ಮ ಎಂಬ ಹೆಸರು ಈ ಭಾಗದಲ್ಲಿ ಮನೆಮನೆಗೂ ರೂಢಿಯಲ್ಲಿರುವುದನ್ನು ನೋಡಿದರೆ ಮಾದೇಶ್ವರನ ಜನಪ್ರಿಯತೆ

ಎಷ್ಟೆಂಬುದು ವಿದಿತವಾಗುತ್ತದೆ. ಬೆಂಗಳೂರುಜಿಲ್ಲಾ ರೇವಣಸಿದ್ಧೇಶ್ವರನ ಬೆಟ್ಟದ ಪಕ್ಕದಲ್ಲೊಂದು ಮಾದೇಶ್ವರ ಬೆಟ್ಟವಿದೆ. ಇದೂ ಸಹ ಮಾದೇಶ್ವರ ತಪಸ್ಸು ಮಾಡಿದ ಸ್ಥಳವೆನ್ನುತ್ತಾರೆ

೧೨. **ಶ್ರೀ ನಂಜುಂಡ ಒಡೆಯರ್ (?) ಕುಂತೂರು:** ಶ್ರೀ ಮಾದೇಶ್ವರರು ಕುಂತೂರಿಗೆ ಬಂದ ಕಾಲದಲ್ಲಿ ಅಲ್ಲಿನ ಶ್ರೀ ವೀರಸಿಂಹಾಸನ ಮಠದಲ್ಲಿ ಶ್ರೀ ನಂಜುಂಡ ಒಡೆಯರ್ ಎಂಬ ಮಹನೀಯರೊಬ್ಬರಿದ್ದರೆಂದೂ ಮಾದೇಶ್ವರರು ಅವರಲ್ಲಿ ಕೊಂಚ ಕಾಲ ಶುಶ್ರೂಷೆಮಾಡಿದರೆಂದೂ ಮಾದೇಶ್ವರರು ಈ ದೇಶದ ರಾಜರಾಗಿದ್ದು 'ಮಾದರಸ' ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರೆಂದೂ ರಾಜಾವಳಿ ಕಥೆಯ ಆಧಾರದಿಂದ ಬರೆದ 'ಮಲೆಯ ಮಾದೇಶ್ವರ ಚರಿತಂ' ಎಂಬ ಗ್ರಂಥವಲ್ಲಿ ಹೇಳಿದೆ ಈ ವಿಷಯವನ್ನು ತಕ್ಕಷ್ಟು ಐತಿಹಾಸಿಕ ಸಾಧನೆಗಳಿಲ್ಲದೆ ಒಪ್ಪಲು ಸಾಧ್ಯವಿಲ್ಲ. ವೈರಾಗ್ಯ ಶಿಖಾಮಣಿಗಳಾದ ಮಾದೇಶ್ವರರು ರಾಜರಾಗಿರುವುದು ಅಸಂಭವವಾಗಿ ಕಾಣುತ್ತದೆ. ಅಲ್ಲದೆ 'ರಾಜಾವಳಿ ಕಥೆ' ಆಧುನಿಕ ಗ್ರಂಥವಾದುದರಿಂದ ಅದು ಅಷ್ಟೊಂದು ಪ್ರಮಾಣಾರ್ಹವಾದ ಗ್ರಂಥವಾಗಿ ತೋರುವುದಿಲ್ಲ ಶ್ರೀ ನಂಜುಂಡ ಒಡೆಯರ ವಿಷಯ ಶ್ರೀ ಕುಂತೂರು ಮಠದ ಚರಿತ್ರೆಯಿಂದ ಸಿದ್ಧವಾಗುವ ವಿಚಾರ.

೧೩. **ಶ್ರವಣನ ಸೆರೆ ವಿಚಾರ:** ಶ್ರೀ ಮಾದೇಶ್ವರರು ನಡುಮಲೆಯ ಕಾಡುಜನರಿಗೆ ಲಿಂಗಧಾರಣ ಮಾಡಿಸಿದುದು, ದನಕರುಗಳ ರೋಗರುಜಿನಗಳನ್ನು ಪರಿಹರಿಸಿದುದು ಮೊದಲಾದ ಲೋಕೋಪಕಾರಗಳನ್ನು ಮಾಡಿದುದಲ್ಲದೆ ಆ ಕಾಲದಲ್ಲಿ ಈ ಭಾಗದಲ್ಲಿ ಪ್ರಸಿದ್ಧನಾಗಿದ್ದ ಶ್ರವಣನು ಸೆರೆಹಾಕಿದ್ದ ೭೭ ಮಂದಿ ಜಂಗಮರನ್ನೂ ಹಲವು ದೇವರುಗಳನ್ನೂ ತನ್ನ ಮಹಿಮೆಯಿಂದ ಬಿಡಿಸಿದಂತೆ ಮಾದೇಶ್ವರ ಚರಿತ್ರೆ (ಶ್ರೀ ಪುಟ್ಟಮಲ್ಲಪ್ಪ ವಿರಚಿತ) ಮಾದೇಶ್ವರ ಸಾಂಗತ್ಯ ಮೊದಲಾದ ಗ್ರಂಥಗಳಲ್ಲಿದೆ. ಆದರೆ ಈ ಶ್ರವಣ ಅಂದರೆ ಜಿನ ಮುನಿಯಾರು ? ಆತನು ಎಲ್ಲಿದ್ದವನು ? ಇತ್ಯಾದಿ ವಿಚಾರಗಳು ತಿಳಿದುಬಂದಿಲ್ಲ. ಕ್ರಿ ಶ ೬ನೇ ಶತಮಾನದಲ್ಲಿಯೇ ಪೂಜ್ಯಪಾದನೆಂಬ ಜೈನಾಚಾರ್ಯನು ಕೊಳ್ಳೇಗಾಲದ ಪಕ್ಕದ 'ಬಸ್ತಿಹಳ್ಳಿ'ಯಲ್ಲಿದ್ದಂತೆ ಚರಿತ್ರೆಯಿಂದ ತಿಳಿದುಬಂದಿದೆ. ಆದುದರಿಂದ ಮಾದೇಶ್ವರನ ಕಾಲದಲ್ಲಿ ಕೂಡ ಈ ಭಾಗದಲ್ಲಿ ಜಿನಮುನಿಗಳ ಅಸ್ತಿತ್ವ ಇದ್ದು ಮತಾಭಿಮಾನದ ಆ ಕಾಲದಲ್ಲಿ ಇಂತಹ ಜಂಗಮರನ್ನು ಸೆರೆಯಲ್ಲಿ ಹಾಕುವ ಘಟನೆ ನಡೆದಿದ್ದರೂ ನಡೆದಿರಬಹುದು. ಧಾರ್ಮಿಕ ಜಗದ್ಗುರುವಾದ ಶ್ರೀ ಮಾದೇಶ್ವರರು ಆ ಶ್ರಮಣನ ಸೆರೆಯಲ್ಲಿದ್ದವರನ್ನು ಬಿಡಿಸಿಯೂ ಇರಬಹುದು. ಇದು ಪರಿಶೀಲಿಸಬೇಕಾದ ಸಂಗತಿ. ಹೈದರಲ್ಲಿಖಾನ್ ತಾಮ್ರಶಾಸನದಲ್ಲಿಯೂ ಈ ಶ್ರಮಣನ ಸೆರೆ ಬಿಡಿಸಿದ ವಿಚಾರವಿದೆ

**ಅನುಬಂಧ-೨**

# ಭೂಕೈಲಾಸ ನಡುಮಲೆ

ಕರ್ಣಾಟಕ ದೇಶದ ದಕ್ಷಿಣ ಭಾಗದಲ್ಲಿ ಪೂರ್ವಘಟ್ಟಗಳ ಮಧ್ಯಪ್ರದೇಶದಲ್ಲಿ- ಮೈಸೂರು ಪಕ್ಕದ ಕೊಳ್ಳೇಗಾಲ ತಾಲ್ಲೂಕಿನಲ್ಲಿ-ಈ ಮಹಾಕ್ಷೇತ್ರವು ಅನೇಕ ಶತಮಾನಗಳಿಂದ ತನ್ನ ಮಾಹಾತ್ಮ್ಯವನ್ನು ಸ್ವಲ್ಪವೂ ಕಳೆಗುಂದದಂತೆ ಉಳಿಸಿಕೊಂಡು ಬಂದಿದೆ ಕೊಳ್ಳೇಗಾಲದಿಂದ ಪೂರ್ವಮುಖವಾಗಿ ಮಧುವನಹಳ್ಳಿ, ಸಿಂಗಾನಲ್ಲೂರು, ಕಾಮಗೆರೆ, ಹನೂರು, ಅಜ್ಜೀಪುರ, ರಾಮಾಪುರ, ಕೌದಳ್ಳಿ ಮಾರ್ಗವಾಗಿ ಶ್ರೀ ಬೆಟ್ಟಕ್ಕೆ ಮಾರ್ಗವಿದೆ. ಕೌದಳ್ಳಿಯಿಂದ ಮುಂದೆ ಅರಣ್ಯಮಾರ್ಗದಲ್ಲಿ ೧೦ ಮೈಲಿ ಪ್ರಯಾಣಮಾಡಿದರೆ ಶ್ರೀ ಮಲೆಯ ಮಾದೇಶ್ವರ ಸ್ವಾಮಿಯ ಬೆಟ್ಟದ ತಪ್ಪಲು 'ತಾಳಬೆಟ್ಟ' ಸಿಕ್ಕುತ್ತದೆ. ಅಲ್ಲಿಂದ ಬೆಟ್ಟವನ್ನು ಹತ್ತಲು ಪ್ರಾರಂಭಿಸಬೇಕು. ಸುಮಾರು೭-೮ ಮೈಲಿ ಪ್ರಯಾಣಮಾಡಿ ಏಳು ಬೆಟ್ಟಗಳನ್ನು ಹತ್ತಿ ಇಳಿದರೆ ಶ್ರೀ ಸ್ವಾಮಿಯ ದೇವಾಲಯವಿರುವ **ನಡುಮಲೆ** ಕ್ಷೇತ್ರವನ್ನು ನಾವು ಸಂದರ್ಶಿಸಬಹುದು ಹೀಗೆ ಬೆಟ್ಟವನ್ನು ಹತ್ತಲು ತಾಳಬೆಟ್ಟದಿಂದ **ಬಸವನ ದಾರಿ, ಸರ್ಪನ ದಾರಿ** ಎಂಬೆರಡು ಮಾರ್ಗಗಳಿವೆ. ಸರ್ಪನ ದಾರಿ ಬಹಳ ಕಡಿದಾಗಿದೆ. ಬಸವನದಾರಿ ಸುಗಮವಾಗಿದೆ ತಮಿಳುನಾಡಿನಿಂದ ಈ ಕ್ಷೇತ್ರಕ್ಕೆ ಬರುವಜನರು ಸೇಲಂ, ಮೆಟ್ಟೂರು ಕೊಳತ್ತೂರು, ಕಾವೇರಿಪುರಂ, ಪಾಲಾರ್ ಮಾರ್ಗವಾಗಿ ಪೂರ್ವಘಟ್ಟವನ್ನು ಪ್ರವೇಶಿಸಿ, ಅಲ್ಲಿಂದ ಸುಮಾರು ೮-೧೦ ಮೈಲಿ ನಡೆದುಬಂದು ಶ್ರೀ ಕ್ಷೇತ್ರವನ್ನು ಸಂದರ್ಶಿಸುತ್ತಾರೆ ಸುಮಾರು ೩೦-೪೦ ಮೈಲಿಗಳ ವಿಸ್ತಾರದಲ್ಲಿ ಸುಂದರ ಪ್ರಕೃತಿಯ ಮಧ್ಯಭಾಗದಲ್ಲಿ ಶ್ರೀ ಮಾದೇಶ್ವರ ತಪೋಭೂಮಿಯು ಪ್ರಶಾಂತವೂ ಪವಿತ್ರವೂ ಆದ ಆವರಣದಲ್ಲಿದ್ದು ಭಕ್ತಕೋಟಿಯನ್ನು ತನ್ನೆಡೆಗೆ ಆಕರ್ಷಿಸುತ್ತಿದೆ ಶ್ರೀ ದೇವಾಲಯಕ್ಕೆ ಅನತಿದೂರದಲ್ಲಿ **'ದೇವರಹಳ್ಳಿ'** ಎಂಬ ಗ್ರಾಮ ಇದೆ. ಅಲ್ಲಿ ತಮ್ಮಡಿಗಳೆಂಬ ದೇವರ ಅರ್ಚಕರು ವಾಸವಾಗಿದ್ದಾರೆ. ಇವರೆಲ್ಲರೂ ಲಿಂಗವಂತ ಧರ್ಮದವರಾಗಿದ್ದಾರೆ. ಈ ಕ್ಷೇತ್ರದ ಸುತ್ತಮುತ್ತಲೂ ಪರ್ವತ ಪ್ರದೇಶದಲ್ಲಿರುವ ಆನೇವಲ, ಕೊಂಬುದಿಕ್ಕಿ-ಕೊಕ್ಕುವಾರ-ತೋಕಾರೆ-ದೊಡ್ಡಣೆ-ಹಳೇಊರು- ಮಾರಬಳ್ಳಿ - ಕಡಬೂರು-ಸುಳ್ವ

ವಾಡಿ–ಬಿದರಳ್ಳಿ–ಎಳಸೀಕೆರೆ-ಕೀರನಹೊಲ–ತೊಳಸೀಕೆರೆ -ಇಂದಿಗನತ್ತ–ನಾಗ ಮಲೆ–ಪಡಿಸನತ್ತ – ಕೊಂಡನೂರು ಎಂಬ ಸಣ್ಣ ಪುಟ್ಟ ಊರುಗಳಿವೆ ಹಿಂದೆ ಈ ಊರುಗಳಿಗೆ 'ಬೇಡಗಂಪಣ ರಾಜ್ಯ' ಎಂದು ಹೆಸರಿತ್ತು. ಪ್ರಾಯೇಣ ಇಲ್ಲಿ ಲ್ಲಾ ಶ್ರೀ ಸ್ವಾಮಿಯವರ ಭಕ್ತರೂ ಅರ್ಚಕರೂ ಆದ ಕನ್ನಡ ಮಾತನಾಡುವ ಲಿಂಗವಂತ ಜನರೇ ವಿಶೇಷವಾಗಿ ವಾಸವಾಗಿದ್ದಾರೆ. ಇವರಿಗೆ ತಮಿಳು ಭಾಷೆ ಯೂ ಬರುತ್ತದೆ. ಈ ಬೆಟ್ಟವನ್ನು ಇಳಿದು ತೆಂಕಮುಖವಾಗಿ ಹೋದರೆ ತಮಿಳುನಾಡು ಸಿಕ್ಕುತ್ತದೆ.

ಶಿವರಾತ್ರಿಯ ಕಾಲದಲ್ಲಿಯೂ, ದೀಪಾವಳಿ ಮತ್ತು ಮಹಾನವಮಿಯ ಕಾಲದಲ್ಲಿಯೂ ಇಲ್ಲಿ ಜಾತ್ರೆಗಳು ನಡೆಯುತ್ತವೆ ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮುತ್ತೂರು ಮತ್ತು ಸೇಲಂ ಜಿಲ್ಲೆಗಳಿಂದ ಭಕ್ತರು ಇಲ್ಲಿಗೆ ಬಹಳವಾಗಿ ಬಂದುಹೋಗುತ್ತಾರೆ ಭಕ್ತರ ಕಾಣಿಕೆಯ ರೂಪವಾಗಿ ವರ್ಷಕ್ಕೆ ಸುಮಾರು ೬೪,೦೦೦ ರೂ. ನಷ್ಟು ಉತ್ಪನ್ನ ಇದೆ ಮದರಾಸ್ ಸರ್ಕಾರ ದವರು ಈದೇವಸ್ಥಾನದ ವ್ಯವಸ್ಥೆಗಾಗಿ ಧರ್ಮದರ್ಶಿಗಳ ಸಮಿತಿಯನ್ನು ನೇಮಿ ಸಿದ್ದಾರೆ. ಸರ್ಕಾರದ ಪರವಾಗಿ ಒಬ್ಬ 'ಎಕ್ಸಿಕ್ಯೂಟಿವ್ ಆಫೀಸರ್' ಇದ್ದಾರೆ.

ಶ್ರೀ ಮಾದೇಶ್ವರ ಸ್ವಾಮಿಯ ದೇವಾಲಯವು ಸುತ್ತಲೂ ಸುಂದರವಾದ ಪೌಳಿ ಮತ್ತು ಮಂಟಪಗಳಿಂದ ಅಲಂಕೃತವಾಗಿದೆ ಈ ಮಂಟಪಗಳು ಪೂರ್ವ ಪಶ್ಚಿಮ ೨೪,ದಕ್ಷಿಣೋತ್ತರ ೧೮ ಅಂಕಣಗಳು ಉಳ್ಳುವಾಗಿವೆ. ದೇವಾಲಯದ ಮುಖ ಪಶ್ಚಿಮ, ಗೋಪುರ ದಕ್ಷಿಣ, ಉತ್ತರಕ್ಕೆ ಅಲಂಬಾಡಿ ಬಸವೇಶ್ವರದ್ವಾರ ಎಂಬ ಬಾಗಿಲುಂಟು. ದೇವಾಲಯದಲ್ಲಿ ಗರ್ಭಗುಡಿ ಒಂದು ಅಂಕಣ, ಸುಖ ನಾಸಿ ಒಂದು ಅಂಕಣ, ಮುಖಮಂಟಪ ಒಂಬತ್ತು ಅಂಕಣ, ನವರಂಗ ಮಂಟಪ ಇಪ್ಪತ್ತೈದು ಅಂಕಣ ಇದೆ ಶ್ರೀ ಮಾದೇಶ್ವರನ ಎದುರು ಭಾಗ ದಲ್ಲಿ ಒಂದು, ಅಂಕಣದ ಬಸವೇಶ್ವರನ ಗುಡಿ ಇದೆ. ಇದನ್ನು 'ಬೆಳಕವಾಡಿಯ ಹೊನ್ನಮಲಗ ಶೆಟ್ಟರ ಮಗ **ಗುರುಬಸೆಟ್ಟಿ**' ಎಂಬಾತನು ಯುವ ಸಂವತ್ಸರ ಪುಷ್ಯಮಾಸ ಬಹುಳ ಬಿದಿಗೆಯಲ್ಲಿ ಕಟ್ಟಿಸಿದಂತೆ ಶಾಸನವಿದೆ. ಇದು ಯಾವ ಯುವ ಸಂವತ್ಸರ ಎಂಬುದು ಗೊತ್ತಾಗುವುದಿಲ್ಲ. ಈ ದೇವಾಲಯದ ಮುಖ ಮಂಟಪದಲ್ಲಿ ಪ್ರಾಚೀನವಾದ ವೀರಭದ್ರನ ವಿಗ್ರಹವಿದೆ. ಆದ್ದರಿಂದಲೇ ಇಲ್ಲಿ ಜಾತ್ರೆಯ ಕಾಲದಲ್ಲಿ ಅಗ್ನಿಕೊಂಡ ನಡೆಯುತ್ತದೆ. ವೀರಭದ್ರನ ವಿಗ್ರಹ

ಇರುವುದನ್ನು ನೋಡಿದರೆ ಇದು ಪ್ರಾಚೀನಕಾಲದಿಂದ ವೀರಶೈವಕ್ಷೇತ್ರವಾಗಿತ್ತೆಂದು ಕಂಡುಬರುತ್ತದೆ ವೀರಭದ್ರನಿಗೂ ವೀರಶೈವರಿಗೂ ಚಾರಿತ್ರಿಕವಾದ ಬಾಂಧವ್ಯವಿದೆ ಶೈವಧರ್ಮದಲ್ಲಿ ಕೂಡ ವೀರಭದ್ರನು ಪ್ರಾಚೀನ ವಿಭೂತಿಯಾಗಿದ್ದಾನೆ. ಶ್ರೀ ಮಾದೇಶ್ವರರ ಕಾಲ ಸುಮಾರು ೧೪ನೇ ಶತಮಾನವೆಂದು ನಿರ್ಧರವಾಗಿದೆ ಇವರು ಶೂನ್ಯ ಪೀಠದ ಆರನೇ ಪಟ್ಟದ ಜಗದ್ಗುರುಗಳೆಂದು ನಿರಂಜನವಂಶ ರತ್ನಾಕರದಲ್ಲಿದೆ.

ಈ ಕ್ಷೇತ್ರದಲ್ಲಿ ಸಾಲೂರು ಮಠ, ಶೇಷಣ್ಣೊಡೆಯರ ಸ್ಥಾನ, ಅಂತರ ಗಂಗೆ, ನಾಗಮಲೆ ಇತ್ಯಾದಿ ಇತರ ಮಹತ್ವದ ಸ್ಥಳಗಳೂ ಇವೆ ಸಾಲೂರು ಮಠವು ಶ್ರೀ ಮಾದೇಶ್ವರ ಸ್ವಾಮಿಯವರ ಸಂಗಡಲೇ ಕುಂತೂರಿನಿಂದ ಬಂದಂಥ ಅವರ ಶಿಷ್ಯ ಸಂಸಾರಿ ಸಂಗಪ್ಪನವರಿಂದ ಪ್ರಾರಂಭಿಸಲ್ಪಟ್ಟಿದೆಂದು ತಿಳಿದು ಬಂದಿದೆ.

ಶ್ರೀ ದೇವಾಲಯದಲ್ಲಿ ಹುಲಿಯ ವಾಹನ, ವೃಷಭ ವಾಹನ, ರುದ್ರಾಕ್ಷಿ ಮಂಟಪ ಈ ಉತ್ಸವಗಳು ವೈಭವದಿಂದ ನಡೆಯುತ್ತಿವೆ ಹುಲಿ ಮತ್ತು ವೃಷಭ ವಾಹನಗಳು ಬೆಳ್ಳಿಯಿಂದ ವಿರಚಿತವಾಗಿವೆ ನೂತನ ರಥವನ್ನು ಮೈಸೂರಿನ ಮಹಾರಾಜರು ಕೈ|| **ನಾಲ್ವಡಿ ಕೃಷ್ಣರಾಜ ಒಡೆಯರವರು** ೧೯೩೫ ನೇ ವರ್ಷದಲ್ಲಿ ಮಾಡಿಸಿಕೊಟ್ಟಿದ್ದಾರೆ. ಈ ನೂತನ ರಥವು ಬಹಳ ಸುಂದರವಾಗಿದೆ

ಪುಣ್ಯಶ್ಲೋಕರಾದ ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರವರು ಶ್ರೀ ಸ್ವಾಮಿಯವರಿಗೆ ಶಾಲಿವಾಹನ ಶಕ ೧೮೩೮ ರಲ್ಲಿ ಭಂಗಾರದ ಕವಚವನ್ನು ಮಾಡಿಸಿ ಕೊಟ್ಟಿದ್ದಾರೆ ಅದೇ ಸಂದರ್ಭದಲ್ಲಿ ಮೈಸೂರು ರಾಣೀವಾಸದ ಮಾನ್ಯ ಮಹಿಳೆಯರು ಶ್ರೀ ಸ್ವಾಮಿಯವರಿಗೆ ಬೆಲೆಯುಳ್ಳ ಆಭರಣಗಳನ್ನು ಕೊಟ್ಟಿದ್ದಾರೆ. ಆ ಭಂಗಾರದ ಕವಚವನ್ನು ಶಕ ೧೮೫೨ ರಲ್ಲಿ ಶ್ರೀ ನಾಲ್ವಡಿ ಕೃಷ್ಣರಾಜ ಪ್ರಭುಗಳು ರತ್ನಖಚಿತ ವಿಭೂತಿ, ತಾಟಂಕ, ಸರ್ಪಕುಂಡಲ, ಗಂಗೆ ಅಲಂಕಾರ ಮೊದಲಾದವುಗಳಿಂದ ಕಂಗೊಳಿಸುವಂತೆ ಮಾಡಿಸಿದರು. ಈ ಕ್ಷೇತ್ರಕ್ಕೆ ನವಾಬ್ ಹೈದರಲ್ಲಿಖಾನ್ ಬಹದ್ದೂರ್ ಶ್ರೀರಂಗಪಟ್ಟಣದಲ್ಲಿ

ಅಧಿಕಾರವನ್ನು ನಡೆಸುತ್ತಿದ್ದಾಗ ಶಕ ೧೬೯೮ ನೇ ದುರ್ಮುಖಿ ನಾಮ ಸಂವತ್ಸರದಲ್ಲಿ ಕನ್ನಡ ತಾಮ್ರಶಾಸನ ಕೊಟ್ಟಿರುತ್ತಾನೆ ಈಸ್ಟ್ ಇಂಡಿಯಾ ಕಂಪನಿಯ ಸರ್ಕಾರದವರು ತಾ|| ೩೧–೧೦–೧೮೧೨ ರಲ್ಲಿ ಈ ದೇವಾಲಯದ ಅರ್ಚಕರಿಗೆ ಒಂದು ಸನ್ನದನ್ನು ಕೊಟ್ಟಿರುತ್ತಾರೆ ಅದು ತಮಿಳಿನಲ್ಲಿದೆ

ಶ್ರೀ ಮಾದೇಶ್ವರ ಸ್ವಾಮಿಯವರು ಮಹಾ ಶಿವಯೋಗಿಗಳೂ, ಶ್ರೀ ಅಲ್ಲಮ ಪ್ರಭುಗಳ ಗುರು ಪರಂಪರೆಗೆ ಸೇರಿದವರೂ, ಶೂನ್ಯ ಸಿಂಹಾಸನದ ಅಧ್ಯಕ್ಷರಾಗಿದ್ದವರೂ ಎಂದು ತಿಳಿದುಬಂದಿದೆ. ಈ ಮಹಾತ್ಮರನ್ನು ಕುರಿತು ಮಿಣ್ಯದ ಗುರುಸಿದ್ಧ ಕವಿಯು [ಕ್ರಿ ಶ ೧೭೫೦] "ಮಾದೇಶ್ವರ ಸಾಂಗತ್ಯ" ಎಂಬ ಒಂದು ಕಾವ್ಯವನ್ನು ಬರೆದಿದ್ದಾನೆ ನಿರಂಜನವಂಶ ರತ್ನಾಕರದಲ್ಲಿಯೂ ಈ ಕ್ಷೇತ್ರದ ಬಗ್ಗೆ ಉಲ್ಲೇಖವಿದೆ 'ಸುತ್ತೂರು ಗುರುಪರಂಪರೆ'ಯಲ್ಲಿಯೂ ಈ ಬಗ್ಗೆ ಕೆಲಸಂಗತಿಗಳು ಕಂಡುಬರುತ್ತಿವೆ ಹೈದರಲ್ಲಿ ಶಾಸನ ಮತ್ತು ಕಂಪನಿ ಸರ್ಕಾರದ ತಹನಾಮೆಗಳಿಂದ ಕೆಲವು ವಿಚಾರ ತಿಳಿದುಬರುತ್ತವೆ. ಈ ಕ್ಷೇತ್ರದ ಸ್ಥಳ ಪುರಾಣವೊಂದಿದ್ದು ಅದು ಕಣ್ಮರೆಯಾಗಿದೆ

ಶ್ರೀ ದೇವಾಲಯ ಸಮಿತಿಯವರೂ ಮದರಾಸು ಸರ್ಕಾರದವರೂ ಕೂಡಿ ಶ್ರೀ ಕ್ಷೇತ್ರಕ್ಕೆ ಸುಲಭವಾಗಿ ಯಾತ್ರಿಕರು ಹೋಗಿ ಬರಲು ಅನುಕೂಲವಾಗುವಂತೆ ಈಗ ಬೆಟ್ಟದಲ್ಲಿ ಮೋಟಾರುರಸ್ತೆಯನ್ನು ಮಾಡಿಸಿದ್ದಾರೆ ಆ ರಸ್ತೆಯ ಪ್ರಾರಂಭೋತ್ಸವವನ್ನು ೧೮–೨–೫೩ ರಂದು **ಮೈಸೂರು ಮಹಾರಾಜರವರು** ಕೃಪೆಮಾಡಿ ನೆರವೇರಿಸಿದರು ಶ್ರೀ ಕ್ಷೇತ್ರದಲ್ಲಿರುವ ತಮ್ಮಡಿಗಳ ಮನೆಗಳಲ್ಲಿಯೂ ಸಾಲೂರು ಮಠದಲ್ಲಿಯೂ ನೂರಾರು ತಾಳಯೋಲೆಯ ಗ್ರಂಥಗಳಿವೆ ಶ್ರೀ ಮಾದೇಶ್ವರ ಕ್ಷೇತ್ರವು ಎಲ್ಲ ವಿಧದಿಂದಲೂ ಶ್ರೀಶೈಲ ಕ್ಷೇತ್ರವನ್ನು ಹೋಲುತ್ತದೆ ಎಂಬುದು ಈ ಉಭಯ ಕ್ಷೇತ್ರಗಳ ಯಾತ್ರೆಯನ್ನು ಮಾಡಿದವರ ಅಭಿಪ್ರಾಯವಾಗಿದೆ ಶ್ರೀ ಮಾದೇಶ್ವರ ಗುಡಿಗೆ ಸುಮಾರು ೯ ಮೈಲಿ ದೂರದಲ್ಲಿ ನಾಗಮಲೆ ಇದೆ. ಇದು ಮಹಿಮಾಸ್ಥಾನವೂ ಶ್ರೀ ಸ್ವಾಮಿಯವರ ತಪೋಭೂಮಿಯೂ ದರ್ಶನಾರ್ಹವೂ ಆಗಿದೆ ಶ್ರೀ ಮಾದೇಶ್ವರ ಬೆಟ್ಟಕ್ಕೆ ಯಾತ್ರೆಹೋಗಿ ಬರುವವರು ಆ ಅರಣ್ಯಭಾಗದಲ್ಲಿ ಆನೆಗಳ ಹಿಂಡು ಬಹಳವಾಗಿರುವುದೆಂಬುದನ್ನು ಅರಿತಿರಬೇಕು ಬೆಳಗಿನ ೯ ರಿಂದ ಸಂಜೆ ೫

ಘಂಟೆಯುವರೆವಿಗೆ ಬೆಟ್ಟ ಹತ್ತುವುದು ಕ್ಷೇಮಕರ. ಮೋಟಾರು ರಸ್ತೆಯಲ್ಲಿ ಹೋಗುವವರಿಗೆ ಅಷ್ಟಾಗಿ ಅಂಜಿಕೆಗೆ ಕಾರಣವಿಲ್ಲ ಶ್ರೀ ಕ್ಷೇತ್ರಕ್ಕೆ ಬಂದವರ ಸಹಾಯಾರ್ಥವಾಗಿ **ಮೈಸೂರಿನ ಮಹಾರಾಜರು** ಒಂದು ಧರ್ಮಶಾಲೆ ಕಟ್ಟಿಸಿದ್ದಾರೆ ತಾ|| ೪–೧೨–೫೩ ರಂದು ಮೈಸೂರು ಶ್ರೀಮದ್ಯುವರಾಣಿ ಯವರಾದ ಮಹಾಮಾತೃಶ್ರೀ ಕೆಂಪು ಚೆಲುವಾಜಮ್ಮಣ್ಣಿಯವರ ಅಮೃತ ಹಸ್ತದಿಂದ ಆ ಧರ್ಮಶಾಲೆಯ ಪ್ರಾರಂಭೋತ್ಸವವು ವೈಭವದಿಂದ ನಡೆಯಿತು

ಕೊಳ್ಳೇಗಾಲಕ್ಕೆ ಎಂಟು ಮೈಲಿ ದೂರದಲ್ಲಿ ಕುಂತೂರಿನ ಪಕ್ಕದಲ್ಲಿರುವ ಶ್ರೀ ಪ್ರಭುಸ್ವಾಮಿ ಬೆಟ್ಟದಲ್ಲಿ ಮಾದೇಶ್ವರರು ಬಾಲ್ಯದಲ್ಲಿ ಇದ್ದರೆಂದು ತಿಳಿದು ಬಂದಿದೆ ಅಲ್ಲಿ ಶ್ರೀ ಆದಿಗಣನಾಥರ ಗದ್ದಿಗೆಯಿದೆ ಅಲ್ಲಿರುವ ಮಠವನ್ನು ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಕಟ್ಟಿಸಿದಂತೆ ಐತಿಹ್ಯವಿದೆ ಈ ಬೆಟ್ಟದ ಬುಡದಲ್ಲಿ ಮಾದೇಶ್ವರನು ಮುಂಡಿಯೂರಿದ ಸ್ಥಳವಿದೆ ಈ ಪ್ರಭುಸ್ವಾಮಿ ಬೆಟ್ಟಕ್ಕೂ ಮಾದೇಶ್ವರ ಬೆಟ್ಟಕ್ಕೂ ಗುರು – ಶಿಷ್ಯ ಸಂಬಂಧವಿದೆ ಮಾದೇಶ್ವರ ಕ್ಷೇತ್ರದಲ್ಲಿರುವ ಸಾಲೂರು ಮಠಕ್ಕೂ ಪ್ರಭುಸ್ವಾಮಿ ಬೆಟ್ಟದಲ್ಲಿರುವ ಸಿಂಹಾ ಸನ ಮಠಕ್ಕೂ ಸಂಬಂಧವಿದೆ ನಿರಂಜನವಂಶ ರತ್ನಾಕರದಲ್ಲಿ ಪ್ರಭುಸ್ವಾಮಿ ಬೆಟ್ಟದಲ್ಲಿರುವ ಗದ್ದಿಗೆಯು ಆದಿಗಣವರನದೆಂದೂ ಮಾದೇಶ್ವರ ಬೆಟ್ಟದಲ್ಲಿ ರುವ ಗದ್ದಿಗೆಯು ನಿರ್ಮಾಯ ಗಣೇಶ್ವರ [ಮಾದೇಶ್ವರ] ನದೆಂದೂ ಹೇಳಿದೆ ಈ ಉಭಯರೂ ಶೂನ್ಯ ಸಿಂಹಾಸನಾಧೀಶ್ವರರಾಗಿದ್ದರೆಂದು ಆ ಗ್ರಂಥದಲ್ಲಿ ಹೇಳಿದೆ ಶ್ರೀ ಮಾದೇಶ್ವರ ನಾಂಗತ್ಯದಲ್ಲಿ ಈ ಮಹಾತ್ಮರ ಹಲವು ಪವಾಡ ಗಳು ವರ್ಣಿಸಲ್ಪಟ್ಟಿವೆ ಪ್ರಭುಸ್ವಾಮಿ ಬೆಟ್ಟದ ಸಮೀಪದಲ್ಲಿಯೇ ಶ್ರೀ ನಿಜಗುಣಶಿವಯೋಗಿಗಳಿದ್ದ ಶಂಭುಲಿಂಗನ ಬೆಟ್ಟವಿದೆ ಅದರಲ್ಲಿ ಶಂಭು ಲಿಂಗನ ಗುಡಿ, ನಿಜಗುಣರ ಗವಿ ಮುಂತಾದುವು ಇವೆ ಈ ಕ್ಷೇತ್ರಗಳು ದರ್ಶನಾರ್ಹವಾಗಿವೆ

ಶ್ರೀ ಮಲೆಯ ಮಾದೇಶ್ವರ ಕ್ಷೇತ್ರದ ವಿಷಯವನ್ನು ತಿಳಿಯುವಾಗ ಇನ್ನೊಂದು ಸಂಗತಿ ಮುಖ್ಯ ಬೆಂಗಳೂರು ಜಿಲ್ಲಾ ಶ್ರೀ ರೇವಣಸಿದ್ಧೇಶ್ವರ ಬೆಟ್ಟದ ಸಮೀಪದಲ್ಲಿ ಕೂಡ 'ಮಾದೇಶ್ವರ ಬೆಟ್ಟ' ಎಂಬ ಕ್ಷೇತ್ರವೊಂದಿದೆ ಇಲ್ಲಿಯೂ ಮಾದೇಶ್ವರರು ಕೆಲವು ಕಾಲ ತಪಸ್ಸುಮಾಡಿದರೆನ್ನುತ್ತಾರೆ.

ಮೈಸೂರು, ಮಂಡ್ಯ, ಬೆಂಗಳೂರು, ಸೇಲಂ, ನೀಲಗಿರಿ ಮತ್ತು ಕೊಯಮು-ತ್ತೂರು ಜಿಲ್ಲೆಗಳಲ್ಲಿ ಹಲವೆಡೆ ಶ್ರೀ ಮಾದೇಶ್ವರರ ದೇವಾಲಯಗಳಿವೆ ಇವೆಲ್ಲ-ವನ್ನೂ ಆ ಮಹಾತ್ಮರ ತೋರುಗದ್ದಿಗೆಗಳೆಂದು ಭಾವಿಸಬಹುದು ಸುತ್ತೂರು ವೀರಸಿಂಹಾಸನ ಮಠದಲ್ಲಿ ಶ್ರೀ ಮಾದೇಶ್ವರರ ಗದ್ದಿಗೆ ಇದೆ. ಅದೇ ಮಠಕ್ಕೆ ಸೇರಿದ ಸೋಮೇಶ್ವರ ದೇವಾಲಯದಲ್ಲಿ ಮಾದೇಶ್ವರರು ದಾಸೋಹಕ್ಕೆ ರಾಗಿ ಬೀಸುತ್ತಿದ್ದ ಮಹಿಮಾನ್ವಿತ ರಾಗಿಕಲ್ಲು ಇದೆ 'ಸುತ್ತೂರು ಮಠ ಸುಖ ಅಂತ ಬಂದರೆ ಪುಟ್ಟಿ ತುಂಬ ರಾಗಿಬಂತು' ಎಂದು ಶ್ರೀ ಮಾದೇಶ್ವರರು ಹೇಳಿದರೆಂಬ-ಗಾದೆ ಮಾತು ಆ ಭಾಗದಲ್ಲಿ ಬಳಕೆಯಲ್ಲಿದೆ

ಶ್ರೀ ಮಾದೇಶ್ವರರ ಶಿಷ್ಯರಾದ ನಿರಂಜನ ಗಣೇಶ್ವರ ಸ್ವಾಮಿಗಳು ನೀಲ-ಗಿರಿ, ಕೊಯಮುತ್ತೂರು, ಸೇಲಂ ಭಾಗಗಳಲ್ಲಿ ಸಂಚರಿಸಿ ಧರ್ಮಪ್ರಚಾರ ಮಾಡಿದರೆಂದು ಗ್ರಂಥಗಳಿಂದ ತಿಳಿದುಬಂದಿದೆ

ಸುತ್ತೂರು ಮಠದ ಗುರುಪರಂಪರೆಯಲ್ಲಿ ಈ ಮಹಾತ್ಮರು ಬಾಲ್ಯದಲ್ಲಿ ಸುತ್ತೂರಿನಲ್ಲಿ ಇದ್ದ ವಿಷಯವು ಹೃದಯಂಗಮವಾಗಿ ಹೇಳಿದೆ.

ಈ ಕಾರಣದಿಂದಲೇ ನೀಲಗಿರಿ ಮತ್ತು ಕೊಯಮುತ್ತೂರು ಜಿಲ್ಲೆಗಳಲ್ಲಿ ಮಾದೇಶ್ವರ ದೇವಾಲಯಗಳೂ, ಮಾದಯ್ಯ, ಮಾದಮ್ಮ ಎಂಬ ಹೆಸರುಗಳೂ ಹೇರಳವಾಗಿ ಕಂಡುಬರುತ್ತಿವೆ ಇದನ್ನೆಲ್ಲಾ ನೋಡಿದರೆ ಕರ್ಣಾಟಕದ ದಕ್ಷಿಣ-ಭಾಗದಲ್ಲಿಯೂ ತಮಿಳುನಾಡಿನ ಉತ್ತರಭಾಗದಲ್ಲಿಯೂ ಮಾದೇಶ್ವರರ ಪ್ರಭಾ-ವವು ಹೆಚ್ಚಾಗಿ ಹಬ್ಬಿದೆಯೆಂದು ಹೇಳಬಹುದು

ಕರ್ಣಾಟಕ ದೇಶದಲ್ಲಿ ವೀರಶೈವ ಧರ್ಮಗುರುಗಳ ಕ್ಷೇತ್ರಗಳು ಬಹಳವಾ-ಗಿವೆ ಅವೆಲ್ಲವೂ ಮಹಿಮರ ಸ್ಥಳಗಳೆನಿಸಿಕೊಂಡಿವೆ ಸೊಲ್ಲಾಪುರದ ಸಿದ್ಧ-ರಾಮೇಶ್ವರ, ಕಲ್ಬುರ್ಗಿಯ ಶರಣ ಬಸವೇಶ್ವರ, ಕೊಟ್ಟೂರು ಬಸವೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ, ಬೆಂಗಳೂರು ಜಿಲ್ಲಾ ರೇವಣಸಿದ್ಧೇಶ್ವರ, ಕುಪ್ಪೂರು ಮರಳಸಿದ್ಧೇಶ್ವರ, ನಾಯನಹಟ್ಟಿ ತಿಪ್ಪೇರುದ್ರಸ್ವಾಮಿ ಇತ್ಯಾದಿಗಳ-ನ್ನು ನಿದರ್ಶನವಾಗಿ ಹೇಳಬಹುದು. ಈ ಮೇಲೆಕಂಡ ಕ್ಷೇತ್ರಗಳೆಲ್ಲವೂ ಮಹಾ ಕ್ಷೇತ್ರಗಳೆನಿಸಿ ಜಾತ್ರೆಗಳನ್ನು ನಡೆಸಿಕೊಳ್ಳುವಂತಹ ಮಹಿಮಾಸ್ಥಾನ ಹಾಗೂ ಪ್ರಭಾವಪೂರ್ಣ ಸ್ಥಾನಗಳೆನಿಸಿವೆ

ಶ್ರೀ ಮಾದೇಶ್ವರ ಕ್ಷೇತ್ರವು ಅತ್ಯಂತ ಜಾಗ್ರತ ಸ್ಥಾನವೆನಿಸಿದೆ. ಇಂದಿಗೂ ಅಲ್ಲಿ ಮದ್ಯ ಮಾಂಸಗಳ ಸೇವನೆಯೂ ಸ್ತ್ರೀಸಂಗವೂ ವರ್ಜ್ಯವೆನಿಸಿವೆ ಶ್ರೀ ಮಾದೇಶ್ವರನು ಭಕ್ತರ ಕಾಮಧೇನುವೆನಿಸಿ, ಭಜಕರ ಕಲ್ಪವೃಕ್ಷವೆನಿಸಿ, ಮುಮುಕ್ಷುಗಳ ಚಿಂತಾಮಣಿಯೆನಿಸಿ ನಡುಮಲೆಯಲ್ಲಿ ಯೋಗಮಹಿಮೆಯಿಂದ ಕಂಗೊಳಿಸುತ್ತಿದ್ದಾನೆ. ಭಕ್ತಕೋಟಿಯನ್ನು ಅನುಗ್ರಹಿಸುತ್ತಿದ್ದಾನೆ.

ಅಭ್ಯುದಯ ಕಾಂಕ್ಷಿಗಳೂ ಮುಮುಕ್ಷುಗಳೂ, ಸಂತಾನ ಭಾಗ್ಯ ಇತ್ಯಾದಿ ಅಪೇಕ್ಷೆಯುಳ್ಳವರೂ ಒಮ್ಮೆಯಾದರೂ ಈ ಕ್ಷೇತ್ರವನ್ನು ಸಂದರ್ಶಿಸಲಿ ಕವಿಗಳು ಚಿತ್ರಗಾರರು, ಶಿಲ್ಪಿಗಳು, ಗಾಯಕರು ಒಮ್ಮೆಯಾದರೂ ಈ ದಿವ್ಯಭವ್ಯ ಸ್ಥಳವನ್ನು ನೋಡಿ ಸ್ಫೂರ್ತಿ ಪಡೆಯಲಿ. ಈ ಭೂಕೈಲಾಸವನ್ನು ಕಣ್ಣಾರ ಕಂಡು ಕೃತಾರ್ಥರಾಗಲಿ. ಮಹಾಮಹಿಮನಾದ ಶ್ರೀ ಮಾದೇಶ್ವರನು ಎಲ್ಲರಿಗೂ ಮಂಗಳವನ್ನುಂಟುಮಾಡಲಿ.

|| ಶಿವಂ ಭೂಯಾತ್ ||

# ಬಿನ್ನಹ

ಕನ್ನಡ ನಾಡಿನ ತೆಂಕಣ ಗಡಿಯಲ್ಲಿ, ತಮಿಳು ನಾಡಿನ **ಬಡಗಣ ಗಡಿ** ಯಲ್ಲಿ, ಪೂರ್ವಘಟ್ಟಗಳ ರಮಣೀಯ ಪ್ರದೇಶದಲ್ಲಿ ತಪೋನಿಷ್ಠರಾಗಿ ಸಮಾಧಿಸ್ಥರಾಗಿ 'ಶ್ರೀ ಗುರು ಮಾದೇಶ್ವರ' ಎಂಬ ಹೆಸರಿನಿಂದ ಪ್ರಸಿದ್ಧರಾಗಿರುವ ನಿರಂಜನ ಜಗದ್ಗುರು ಶ್ರೀ ಸಿದ್ಧಾಯ ಗಣೇಶ್ವರರ ಕ್ಷೇತ್ರಕ್ಕೆ, ಶಿವರಾತ್ರಿ, ನವರಾತ್ರಿ, ಯುಗಾದಿ, ದೀಪಾವಳಿ ಮೊದಲಾದ ವಿಶೇಷ ದಿವಸಗಳಲ್ಲಿ ಲಕ್ಷಾಂತರ ಜನರು ಹೋಗಿ ಬರುತ್ತಿದ್ದಾರೆ ಈ ಮೊದಲು **ಮಾದೇಶ್ವರ ಬೆಟ್ಟಕ್ಕೆ** ಸುಮಾರು ಎಂಟು ಮೈಲಿ ದೂರದಷ್ಟು ಪಾದಚಾರಿಗಳಾಗಿಯೇ ಯಾತ್ರಿಕರು ಹೋಗಿ ಬರಬೇಕಾಗಿತ್ತು ಈಗ ತಾಳಬೆಟ್ಟದಿಂದ ಶ್ರೀ ದೇವಾಲಯದವರೆಗೆ ಮೋಟಾರು ರಸ್ತೆ ನಿರ್ಮಾಣವಾಗಿರುವುದರಿಂದ ಪ್ರಯಾಣ ಸುಲಭವಾಗಿ ಯಾತ್ರಿಕರ ಸಂಖ್ಯೆ ಅಧಿಕವಾಗಿದೆ ಆ ಕ್ಷೇತ್ರದಲ್ಲಿ ಬರುವವರಿಗೆ ಸೌಕರ್ಯಕ್ಕಾಗಿ ಮೈಸೂರು ಮಹಾರಾಜರು **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಒಂದು ಧರ್ಮಶಾಲೆಯನ್ನು ಕಟ್ಟಿಸಿಕೊಟ್ಟುದರಿಂದ ಯಾತ್ರಿಕರಿಗೆ ಅಲ್ಲಿ ವಸತಿ ಸೌಕರ್ಯವೂ ಉಂಟಾಗಿದೆ ಇನ್ನುಮುಂದೆ ಶ್ರೀ ಕ್ಷೇತ್ರವಿರುವ ಪ್ರದೇಶ (ಕೊಳ್ಳೇಗಾಲ ತಾಲ್ಲೂಕು) ಮೈಸೂರು ರಾಜ್ಯಕ್ಕೆ ಸೇರುವುದರಿಂದ ದೇವಾಲಯಕ್ಕೆ ವಿದ್ಯುದ್ದೀಪಗಳೇ ಮೊದಲಾದ ಅಭಿವೃದ್ಧಿ ಕಾರ್ಯಗಳು ಶತಾಧಿಕವಾಗುವುವೆಂಬುದರಲ್ಲಿ ಸಂಶಯವಿಲ್ಲವೆನ್ನಬಹುದು.

ಸುಮಾರು ೬೦೦ ವರ್ಷಗಳಷ್ಟು ಹಿಂದಿನಿಂದ ಶ್ರೀ ಕ್ಷೇತ್ರವು ವಿರಾಜಮಾನವಾಗಿದೆ ಮಾದೇಶ್ವರರ ಬಗ್ಗೆ ಜನಪದ ಸಾಹಿತ್ಯವೂ ತಾಮ್ರಶಾಸನಗಳೂ ದಂತಕಥೆಗಳೂ ಉಪಲಬ್ಧವಿವೆ. ಲಕ್ಷಗಟ್ಟಲೆ ಕನ್ನಡ-ತಮಿಳು ಜನಗಳು ಶ್ರೀ ಸ್ವಾಮಿಯ ಭಕ್ತಿ ಕೈಂಕರ್ಯದಲ್ಲಿ ನಿರತರಾಗಿದ್ದಾರೆ ಮೈಸೂರು ರಾಜಮನೆತನದವರು ಮೊದಲಿಂದಲೂ ಶ್ರೀ ಸ್ವಾಮಿಯ ಸನ್ನಿಧಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾರೆ ಇಷ್ಟಾದರೂ ಶ್ರೀ ಮಾದೇಶ್ವರನ ಬಗ್ಗೆ ಐತಿಹಾಸಿಕವಾಗಿ ಬರೆದ ಒಂದಾದರೂ ಗ್ರಂಥವಿರಲಿಲ್ಲವಾಗಿ ಭಕ್ತಮಂಡಲಿಯವರಿಗೆ ಶ್ರೀ ಸ್ವಾಮಿಯ ಚರಿತ್ರೆಯನ್ನು ತಿಳಿಯಲು ಸಾಧ್ಯವಿಲ್ಲವಾಗಿತ್ತು. **ಈ**

ನ್ಯೂನತೆಯನ್ನು ಪರಿಹರಿಸಬೇಕೆಂದು ದೇವಾಲಯದ ನಿಸ್ಸೀಮ ಸೇವಕರೂ ಧರ್ಮದರ್ಶಿಗಳೂ ಆದ ರಾವ್‌ಸಾಹೇಬ್ ಶ್ರೀ ಜಿ ಪಿ ಮಲ್ಲಪ್ಪನವರು ನಮಗೆ ತಿಳಿಸಿದ ಪ್ರಕಾರ ೧೯೫೪ರಲ್ಲಿ **ಶ್ರೀ ಮಾದೇಶ್ವರ ಚರಿತ್ರೆ** ಎಂಬ ಗ್ರಂಥವನ್ನು ಬರೆದು ಪ್ರಕಟಿಸಿ ಮೈಸೂರಿನ ಮಹಾಪ್ರಭುಗಳ ಸನ್ನಿಧಾನಕ್ಕೆ ಒಪ್ಪಿಸಲಾಯಿತು ಈ ಗ್ರಂಥವು ಭಕ್ತಮಂಡಲಿಯವರ ಹಾಗೂ ಸಾಹಿತ್ಯ ಪ್ರೇಮಿಗಳ ಪ್ರೀತಿ ಗೌರವಗಳನ್ನು ಪಡೆದುದು ಈ ವಿಷಯವಾಗಿ ನಮ್ಮ ಶ್ರದ್ಧಾಸಕ್ತಿಗಳನ್ನು ಕೆರಳಿಸಿತು ಅದರ ಫಲವೇ ಈ ಸಾಂಗತ್ಯ ಗ್ರಂಥ ಪ್ರಕಟನೆ

ಶ್ರೀ ಮಾದೇಶ್ವರ ಚರಿತ್ರೆಯನ್ನು ಬರೆದು ಪ್ರಕಟಿಸಿದಮೇಲೆ ಈ ಸಂಬಂಧವಾದ ಪ್ರಾಚೀನ ಗ್ರಂಥವಿದ್ದರೆ ಅದನ್ನು ಬೆಳಕಿಗೆ ತರುವುದು ಅಗತ್ಯವೆಂದು ನಮಗೆ ಮನದಟ್ಟಾಯಿತು ಮೈಸೂರು ಸರ್ಕಾರದ ಪ್ರಾಚೀನ ಪುಸ್ತಕಾಲಯದಲ್ಲಿ ಸುಮಾರು ಕ್ರಿ ಶ ೧೭೫೦ರಲ್ಲಿ ಬರೆದಿರಬಹುದಾದ ಮಣ್ಣಿನ ಗುರುಸಿದ್ಧ ಕವಿ ವಿರಚಿತವಾದ 'ಮಾದೇಶ್ವರ ಸಾಂಗತ್ಯ' ಎಂಬ ಗ್ರಂಥವೊಂದು ಸುದೈವದಿಂದ ನಮಗೆ ಲಭಿಸಿತು ಶ್ರೀ ಮಾದೇಶ್ವರನ ಭಕ್ತರ ಪ್ರಯೋಜನಾರ್ಥವಾಗಿ ಪುರಾಣ ಪ್ರವಚನಾದಿಗಳನ್ನು ನಡೆಸಲು ಅನುಕೂಲವಾಗಿರುವ ಈ ಗ್ರಂಥವನ್ನು **ಶರಣ ಸಾಹಿತ್ಯ ಗ್ರಂಥಮಾಲೆ**ಯಲ್ಲಿ ಸಂತೋಷದಿಂದ ಪ್ರಕಟಿಸಿದೆವು. ಇದರಿಂದ ಕನ್ನಡ ಸಾಹಿತ್ಯಕ್ಕೂ ಕಿಂಚಿತ್ ಸೇವೆ ಸಂದಂತಾಯಿತೆಂದು ನಮ್ಮ ಹಂಬಲ ಸಹೃದಯರು ಈ **ಪು**ಟ್ಟವರ್ಣಕ ಕಾವ್ಯವನ್ನು ಸ್ವಾಗತಿಸುವರೆಂದು ನಮಗೆ ವಿಶ್ವಾಸವಿದೆ

ಈ 'ಮಾದೇಶ್ವರ ಸಾಂಗತ್ಯ'ವನ್ನು ಓದುವವರ ಸೌಕರ್ಯಕ್ಕಾಗಿ ಕವಿ ಕಾವ್ಯ ವಿಚಾರ, ಶ್ರೀ ಮಾದೇಶ್ವರನ ಬಗ್ಗೆ ದೊರೆತಿರುವ ಐತಿಹಾಸಿಕ ಸಾಹಿತ್ಯ, ಓದುಗರಿಗೆ ನೆರವಾಗುವ ಕಠಿಣ ಶಬ್ದಕೋಶ ಇವನ್ನೆಲ್ಲಾ ಈ ಗ್ರಂಥದಲ್ಲಿ ಅಳವಡಿಸಿದೆ ಶ್ರೀ ಕ್ಷೇತ್ರಕ್ಕೂ ಚರಿತ್ರೆಗೂ ಸಂಬಂಧಪಟ್ಟ ಎಲ್ಲ ಚಿತ್ರಗಳನ್ನೂ ಈ ಗ್ರಂಥದಲ್ಲಿ ಸಮಾವೇಶಗೊಳಿಸಿದೆ

ಶರಣ ಸಾಹಿತ್ಯ ಗ್ರಂಥಮಾಲೆಯ ಮಹಾಪೋಷಕರೂ ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ ಮೈಸೂರು ಮಹಾರಾಜರೂ ಶ್ರೀ ಮಾದೇಶ್ವರರ

**ಕೃಪಾನುಗ್ರಹಕ್ಕೆ ಪಾತ್ರರೂ ಆದ ಶ್ರೀ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಈ ಗ್ರಂಥವನ್ನು ಕೃಪೆಮಾಡಿ ತಮ್ಮ ಸನ್ನಿಧಿಗೆ ಅಂಕಿತವಾಗಿ ಸ್ವೀಕರಿಸಿ ಈ ಗ್ರಂಥದ ಗೌರವವನ್ನು ಅಧಿಕಗೊಳಿಸಿದ್ದಾರೆ ಶ್ರೀ ಜಗದ್ಗುರು ಮಾದೇಶ್ವರ ಸ್ವಾಮಿಯವರು ನಮ್ಮ ಮಹಾರಾಜರವರಿಗೆ ಸಕಲ ಸನ್ಮಂಗಲಗಳನ್ನೂ ಉಂಟುಮಾಡಲೆಂದು ನಮ್ಮ ವಿನಮ್ರ ಪ್ರಾರ್ಥನೆ ನಮ್ಮ ಇತರ ಗ್ರಂಥಗಳಿಗೆ ಪ್ರೋತ್ಸಾಹವಿತ್ತಂತೆಯೇ ಕನ್ನಡ ಮಹಾಜನರು ಈ ನಮ್ಮ ಗ್ರಂಥಕ್ಕೂ ಉದಾರ ಪ್ರೋತ್ಸಾಹವೀಯುವರೆಂದು ನಂಬಲಾಗಿದೆ.

ಶ್ರೀ ಮಾದೇಶ್ವರರ ಜನನ, ಲಿಂಗೈಕ್ಯ, ಇತ್ಯಾದಿಗಳೂ, ಅವರ ಉಪದೇಶ, ಅನುಭವ ಏನೆಂಬುದೂ ಇನ್ನೂ ತಿಳಿದುಬಂದಿಲ್ಲ "ಮಾಯಾವಿ ಮಾದಯ್ಯ" ಎಂದು ಜನ ಹೇಳುವ ಮಾತು ಇದಕ್ಕಾಗಿಯೇ ಎಂದು ತೋರುತ್ತದೆ ಈ ಬಗ್ಗೆ ಯಾರಿಗಾದರೂ ತಿಳಿದಿದ್ದರೆ ನಮಗೆ ಬರೆದು ಉಪಕಾರ ಮಾಡಬೇಕಾಗಿ ಪ್ರಾರ್ಥನೆ ಸದ್ಯಂ ತಿಳಿದಷ್ಟು ಸಂಗತಿ ಸಂಗ್ರಹಿಸಿ ಪ್ರಕಟಿಸಿರುವೆವು

ಮಹಾಮಹಿಮರಾದ ಶ್ರೀ ಮಾದೇಶ್ವರರು ಎಲ್ಲರಿಗೂ ಮಂಗಲವನ್ನುಂಟುಮಾಡಲಿ

ಇಂತು

**ಬ. ಶಿವಮೂರ್ತಿಶಾಸ್ತ್ರೀ**

ಸಂಪಾದಕ

'ಶರಣ ಸಾಹಿತ್ಯ ಗ್ರಂಥಮಾಲಾ' ಬೆಂಗಳೂರು.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೮ | ೧೦ | ಧರ್ಮತರ್ಕ | ಧರ್ಮಕರ್ತ |
| ೨೪ | ೧೧ | ಜಂಗಮಸೋಹಿ | ಜಂಗಮದಾಸೋಹಿ |
| ೨೫ | ೯೮ | ಕಾತಿಹರು | ಕಾದಿಹರು |
| ,, | ೧೩ | ಎಳಹುಲ್ಲ | ಎಳೆಹುಲ್ಲ |
| ,, | ೧೫ | ಘಳಿಲಾಗೆ | ಘಳಿಲನೆ |
| ,, | ೧೭ | ಕರೆವಾರು | ಕರೆವರು |
| ,, | ೧೭ | ಹಾವೆಗಳೊಳು | ಹಂವೆಗಳೊಳು |
| ೨೭ | ೧ | ತರುಲತೆ ಗಡುವು | ತರುಲತೆ ಗಿಡುವು |
| ,, | ೧೨ | ಸಾಲೆಸದಿಹವು | ಸಾಲೆಸೆದಿಹವು |
| ೨೮ | ೫ | ಹೇರಳೆ | ಹೇರಿಳೆ |
| ೨೯ | ೨ | ಮದನಾರಣ | ಮದವಾರಣ |
| ,, | ೧೨ | ಮರಯೊಳಗೆ | ಮಲೆಯೊಳಗೆ |
| ೩೦ | ೧ | ಮರುಜೀವಣೆ | ಮರುಜೇವಣೆ |
| ,, | ೬ | ಸಂತೋಷಗಿಂದ | ಸಂತೋಷದಿಂದ |
| ,, | ೧೮ | ಮಂಜಿರವ | ಮಂಜೀರವ |
| ೩೧ | ೪ | ಕಾನ್ಮಲಿಗ | ಕಾನ್ಮಲಿಗೆ |
| ,, | ೫ | ನಡವುತ | ನಡೆವುತ |
| ,, | ೨೦ | ಚೆರಮ | ಚೇರಮ |
| ೩೨ | ೧೫ | ಮುಂದೆವೂಲಿವ | ಮುಂದೆವೊಲಿವ |
| ೩೬ | ೩ | ಮಲೆಯು | ಮಲೆಯು |
| ೪೩ | ೨ | ಸುಜಾನವ | ಸುಜ್ಞಾನವ |
| ೪೬ | ೫ | ಆಂಜದಿರೆಂದನ್ನಸಾಲೆಯು | ಅಂಜದಿರೆಂದನ್ನಸಾಲೆಯು |

| | | | |
|---|---|---|---|
| ೬೮ | ೧೧ | ಯಲ್ಲ | ಎಲ್ಲ |
| ೬೯ | ೬ | ದೃಷ್ಟಿತಾಗಿತೆಂದು | ದೃಷ್ಟಿತಾಗೀತೆಂದು |
| ,, | ೯ | ಯರಳೆ | ಎರಳೆ |
| ,, | ೧೨ | ಎಳೆವಣ್ಗಳಾಗ | ಎಳೆವೆಣ್ಗಳಾಗ |
| ೭೨ | ೧೯ | ದಶಮುಖದ್ಯೆಯ್ಯ | ದಶಮುಖದಯ್ಯ |
| ,, | ೩ | ಯಿನ್ನು | ಇನ್ನು |
| ,, | ೯ | ಬಲಿದ | ಬಲ್ಲಿದ |
| ೭೮ | ೧೯ | ಹಲಹುಯೊಂದು | ಸಲಹುಯೊಂದು |
| ೧ | ೯೫ | ಬೋಳಿ | ಪೌಳಿ |

## ಶಬ್ದಕೋಶ

**ಅ**

ಅಗ್ಗಣಿ ೨-೫೨ ನೀರು

ಆರ್ತಿ ೧-೩೩ ಪ್ರೀತಿ, ಸಂತೋಷ

ಅಂಗಜ ೧-೭ ಕಾಮ, ಮನ್ಮಥ

ಅಂಘ್ರಿ ೧-೧೧ ಕಾಲು

ಅಂದಣ ೨-೧೦೦ ಪಲ್ಲಕ್ಕಿ

**ಇ**

ಇಷ್ಟಲಿಂಗ ೩ ವೀರಶೈವರು ಪೂಜಿಸುವ ಶಿವಲಿಂಗ

ಇಂದುಧರ ೧-೮೨ ಚಂದ್ರನನ್ನು ಧರಿಸಿರುವವನು, ಶಿವ

ಇಂದುವಾರ ೨ ೯೮ ಸೋಮವಾರ

**ಉ**

ಉದ್ದಂಡ ೧-೮೧ ಆಧಿಕ್ಯ, ಶ್ರೇಷ್ಠ

**ಓ**

ಓಲೆಯ ಚರ ೨-೯೧ ಅಂಚೆಯವನು

**ಕ**

ಕಬ್ಬುವಿಲ್ಲ ೩-೧೧ ಕಾಮ

ಕೀಲಾರ ೨-೬೧ ಕ್ಷೀರಾಗಾರ, ಹಾಲಿನ ಮನೆ

ಕುಡಿನೋಟ ೧-೨೬ ಕಡೆಗಣ್ಣು ನೋಟ, ಪ್ರೇಮದ ದೃಷ್ಟಿ

ಕೇಣ ೨-೧೧೬ ಮಾತ್ಸರ್ಯ

ಕೋವಿದ ೧-೨೮ ವಿದ್ವಾಂಸ

ಕೃತಿ ೧-೨೩ ಕಾವ್ಯ

ಕಂತುಹರ ೩ ೩೨ ಕಾಮನನ್ನು ಸುಟ್ಟವ, ಶಿವ

ಕಂಪಣ ೧-ಗುಂಪು, ಸಮೂಹ

ಕುಂಜರ ಚರ್ಮಾಂಬರ ೨-೪೬ ಶಿವ

ಕೊಂಗರು ೨ ೧೦೦ ತಮಿಳರು

**ಖ**

ಖಟ್ವಾಂಗಧರ ೨-೩೭ ಶಿವ

**ಗ**

ಗಗ್ಗರ ೨-೧೪೩ ಕಾಲಿನ ತೋಡ

ಗಾವಿಲ ೧-೪ ಹಳ್ಳಿಯವ, ದಡ್ಡ

**ಘ**

ಘಸಣಿ ೧-೩೮ ಕಷ್ಟ

**ಚ**

ಚಿತ್ತಜವೈರಿ ೨-ಶಿವ, ಮಾದೇಶ್ವರ

ಚೂಣಿ ೨-ಸೈನ್ಯದ ಮುಂಭಾಗ

ಚೆನ್ನಡಿ ೧-೧೯ ಒಳ್ಳೆಯಕಾಲು, ಚೆಲುವಾದ ಅಡಿ

ಚಂಗಡಿ ೨-೬೯ ದನಗಳ ದೊಡ್ಡಿ

**ಜ**

ಜಾಗರ ೩-೮೯ ಎಚ್ಚರ

**ತ**

ತರು ೧-೩೯ ವೃಕ್ಷ

ತಿಮಿರ ೧-೮೦ ಕತ್ತಲೆ

ತುರುಗ ೩-೭೬ ಕುದುರೆ

ತುರು ೧-೩೯ ಹಸು

ತೆರ ೨-೯೭ ಹೆಣ್ಣಿಗೆ ಕೊಡುವ ಹಣ

**ದ**

ದಾರುವಂದಿ ೧ ೫೮ ಒಂದುಜಾತಿ ಹಂದಿ

ದೃಢ ೧-೩ ನಿಶ್ಚಯ

ದ್ಯುಮಣಿಯ ಸುತ ೦-೭೨ ಯಮ

ದಿಂಡುಗೆಡೆ ೧-೮೧ ಅಡ್ಡ ಬೀಳು

**ನ**

ನಿಳಯ ೧-೮೬ ಮನೆ

ನುಗ್ಗುದೈವ ೩-೭೧ ಕೀಳು ದೇವತೆ

ನೇಸರು ೧ ೮೦ ಸೂರ್ಯ

**ಪ**

ಪಶ್ಚಿಮಾದ್ರಿ ೧-೮೬ ಪಡುವಣ ಬೆಟ್ಟ

ಪವಡಿಸು ೧-೮೩ ಮಲಗು

ಪರುವ ೩-೯೧ ವಿಶೇಷವಾದ ಔತಣ

ಪೆರೆ ೩-೧೧೧ ಚಂದ್ರ

**ಬ**

ಬಿತ್ತರಿಸು ೧-೨೭ ಹೇಳು

ಬಿರುಬು ೧-೩೬ ಕಠಿಣ

ಬಿಸಿನೇತ್ರ ೨-೨೧ ಫಾಲನೇತ್ರ, ಹಣೆಗಣ್ಣು

ಬೆಳತಿಗೆ ಕಣ್ಣು ೩ ೧೫ ಪ್ರಕಾಶಮಾನವಾದ ಕಣ್ಣು

ಬೇಡ ಗಂಪಣ ೧-೪೭ ಬೇಡರ ಗುಂಪು

ಪೌಳಿ ೧-೯೫ ಆವರಣ

**ಭ**

ಭವರೋಗ ೨-ಹುಟ್ಟುಸಾವುಗಳ ಬೇನೆ

ಭಾನು ೧-೨೬ ಸೂರ್ಯ

ಭುವನ ೧-೨೧ ಲೋಕ

ಭೂಧರ ೧-೫೩ ಬೆಟ್ಟ

ಭೂಪತಿ ೧ ೨೪ ರಾಜ

ಭೋಗಿಭೂಷಣ ೩-೮೯ ಶಿವ

**ಮ**

ಮಕುಟ ೧-೭ ಕಿರೀಟ

ಮದವಾರಣ ೩-೧೮ ಸೊಕ್ಕಿದ ಆನೆ

ಮನ್ನೆಯರು ೨-೯೯ ಗಣ್ಯರು

ಮೀನಾಂಕವೈರಿ ೨-೪೨ ಶಿವ

ಮೊರಡಿ ರೆ ೩೯ ದಿಬ್ಬ

ಮಂಜೀರ ೧-೯೮,೧ ೯೪ ಅಂದುಗೆ

ಮಂದರಗಿರಿ ೧-ಮಾದೇಶ್ವರ ಬೆಟ್ಟ

**ರ**

ರಸಿಕ ೧ ೩೦ ಜಾಣ

**ಲ**

ಲಾಕುಳ ೧-೬೭ ಯೋಗದಂಡ

**ವ**

ವಾಣಿ ೧ ೧೦ ಸರಸ್ವತಿ, ಶಾರದೆ

**ಶ**

ಶ್ರೀಪತಿ ಸುತ ೨-೧ ಕಾಮ

ಶ್ರುತಿ ೧ ೬ ನಾಲ್ಕು ವೇದಗಳು

**ಸ**

ಸಾಗರ ಶಯನ ೧-೧ ವಿಷ್ಣು

ಸುರನತ ೧ ದೇವತೆಗಳಿಂದ ನಮಸ್ಕರಿಸಿಕೊಂಡವ, ಶಿವ

ಸೊಲ್ಲು ೧-೩೦ ಮಾತು

**ಹ**

ಹಡಪ ೨ ೨೨ ತಾಂಬೂಲಚೀಲ, ಸಂಚಿ

ಹಕ್ಕರಿಕೆ ೨-೧೪೩ ಹಲ್ಲಣ, ತಡಿ, ಜೂಲು

ಹಮ್ಮು ೩-೧೩ ಅಹಂಕಾರ, ಸೊಕ್ಕು,

# ಶರಣ ಸಾಹಿತ್ಯ ಗ್ರಂಥಮಾಲಾ, ಬೆಂಗಳೂರು.

| | | | |
|---|---|---|---|
| ೧ | ಪುರಾತನರ ತ್ರಿವಿಧಿ | ಶ್ರೀ ನಿಜಗುಣ ಶಿವಯೋಗಿ | 1 0 0 |
| *೨ | ವೀರೇಶ ಚರಿತೆ | ರಾಘವಾಂಕ ಕವಿ | 2 0 0 |
| *೩ | ಮನೋವಿಜಯಮ್ | ಗುರುಬಸವ ಕವಿ | 2 0 0 |
| ೪ | ಬಸವೋದಾಹರಣಮ್ | ಪಾಲ್ಕುರಕಿ ಸೋಮನಾಥ | 1 0 0 |
| *೫ | ಬಿಲ್ವಾಷ್ಟೋತ್ತರಮ್ | | 0 4 0 |
| ೬ | ಘನಲಿಂಗಿದೇವರ ವಚನ | ಘನಲಿಂಗಿ ದೇವರು | 1 0 0 |
| *೭ | ಯುಗವಾಣಿ [ಕವನ ಸಂಗ್ರಹ] | | 1 0 0 |
| *೮ | ಸಂಕ್ಷಿಪ್ತ ಶಿವಪೂಜಾವಿಧಿ | ಶ್ರೀ ವಿರೂಪಾಕ್ಷ ಒಡೆಯರ್ | 1 0 0 |
| ೯ | ತುರುಗಾಹಿ ರಾಮಣ್ಣ ವಚನಗಳು | ರಾಮಣ್ಣ | 0 4 0 |
| ೧೦ | ಭಾರತ-ಚೀಣಾ ಜನಜೀವನ | | 0 8 0 |
| ೧೧ | ನ್ಯಾಯ ಶತಕಮ್ | ರಾಮೇಶ್ವರ ಮುಖಿ | 0 12 0 |
| ೧೨ | ಕನ್ನಡಕಲಿ ಸಿರುಮನ ಚರಿತೆ | ಹು ಶ್ರೀ ಜೋಯಿಸರು | 0 12 0 |
| ೧೩ | ದುಂಬಿ (ಕವನ ಸಂಗ್ರಹ) | ಬ ಶಿವಮೂರ್ತಿ ಶಾಸ್ತ್ರೀ | 1 0 0 |
| ೧೪ | ಕನ್ನಡ ಆದಿತ್ಯಪುರಾಣಂ (ಭಾಗ-೧) | ಕವಿರಾಜ ಕಂಠೀರವ | 1 0 0 |
| ೧೫ | ವೀರಶೈವ ಮಹಾಪುರುಷರು ( ,, ) | ಬ ಶಿವಮೂರ್ತಿಶಾಸ್ತ್ರೀ | 5 0 0 |
| ೧೬ | ವೀರಶೈವ ಸಾಹಿತ್ಯ ಮತ್ತು — ಇತಿಹಾಸ (ಭಾಗ ೧) | ಬ ಶಿವಮೂರ್ತಿಶಾಸ್ತ್ರೀ | 2 0 0 |
| ೧೭ | ಸರ್ವಜ್ಞಮೂರ್ತಿ | ಬ ಶಿವಮೂರ್ತಿಶಾಸ್ತ್ರೀ | 1 0 0 |
| ೧೮ | ಭೈರವೇಶ್ವರ ಕಾವ್ಯದ ಕಥಾಸೂತ್ರ | ರತ್ನಾಕರ | 0 12 0 |
| ೧೯ | *ಶ್ರೀ ಮಾದೇಶ್ವರ ಚರಿತ್ರೆ | ಬ ಶಿವಮೂರ್ತಿಶಾಸ್ತ್ರೀ | 1 0 0 |
| ೨೦. | ಷಡಕ್ಷರ ಮಂತ್ರ ಮಹಿಮೆ | ಕೊಂಡಗುಳಿ ಕೇಶಿರಾಜ | 1 0 0 |
| ೨೧ | ಗಣಸಹಸ್ರ ನಾಮಾವಳಿ | ಪಾಲ್ಕುರಕಿ ಸೋಮೇಶ್ವರ ಕವಿ | 1 0 0 |
| ೨೨ | ಪಂಪಾಸ್ಥಾನ ವರ್ಣನಂ | ಅಷ್ಟಭಾಷಾ ಚಂದ್ರಕವಿ | 1 0 0 |
| ೨೩ | ಕನ್ನಡ ಶತಕ ಸಾಹಿತ್ಯ(ಐದು ಶತಕಗಳು) | | 1 0 0 |
| ೨೪ | ಮಾದೇಶ್ವರ ಸಾಂಗತ್ಯ | ಗುರುಸಿದ್ಧಕವಿ | 1 8 0 |

*ಈ ಪುಸ್ತಕಗಳು ಮತ್ತೆ ಅಚ್ಚಿನಲ್ಲಿವೆ

ಸ್ವತಂತ್ರ ಕರ್ನಾಟಕ ಪ್ರೆಸ್, ಬೆಂಗಳೂರು-2